# ಮಹನೀಯರ ಶುಭಾಶಯವು.

ಬಸವಜನ್ಮ ಮಹಾಕಾವ್ಯವು, ಹನ್ನೊಂದು ನೂರಾ ಎಂಭತ್ತೊಂದು ಗದ್ಯಪದ್ಯಗಳಿಂದ ಕೂಡಿ ಹದಿನಾರು ಸಂಧಿಗಳಲ್ಲಿ ಹಣೆಯಲ್ಪಟ್ಟಿದೆ. ಹಾಡುಗಬ್ಬಗಳ ಇಂದಿನ ದಿನಗಳಲ್ಲಿ ಶ್ರೀ ಗುರುಲಿಂಗ ಕವಿಗಳು ಚಂಪೂ ರೂಪವಾಗಿ ಇಂಥ ಮಹಾಕಾವ್ಯವನ್ನು ಬರೆದಿರುವದು ಒಳ್ಳೆಯ ಸಾಹಸದ ಕಾರ್ಯವು. ಇವರ ಭಾಷೆಯೂ ವ್ಯುತ್ಪತ್ತಿಯೂ ಶ್ಲಾಘನೀಯವಾದವು. ಛಂದೋಭಂಗವೂ ವ್ಯಾಕರಣ ದೋಷಗಳೂ ಅಲ್ಲಲ್ಲಿ ಕಂಡು ಬರುತ್ತಿದ್ದರೂ ಕಾವ್ಯಗಂಗೆಯ ಪ್ರವಾಹವು ನಿರರ್ಗಳವಾಗಿದೆ. ಕಾವ್ಯಗಳನ್ನು ಓದುವ ಹಂಬಲವುಳ್ಳವರಿಗೂ ವಿದ್ಯಾರ್ಥಿಗಳಿಗೂ ಇದೊಂದು ರಸದೂಟ. ವಿದ್ಯಾರ್ಥಿಗಳ ಕೈಯಲ್ಲಿಯೂ, ವಾಚನಾಲಯಗಳಲ್ಲಿಯೂ, ಶಾಲೆಕಾಲೇಜುಗಳಲ್ಲಿಯೂ, ರಸಿಕರಲ್ಲಿಯೂ ಇದಕ್ಕೆ ಪ್ರವೇಶ ದೊರಕುವದು ಔಚಿತ್ಯದ ಮಾತು. ಆಶ್ರಯವಿಲ್ಲದೆ ಕವಿತಾಲತೆಯು ಹರಿದು ಕೊರ್ಗಿಪರ್ಗಿ ಪರಿಮಳದ ಪ್ರಾಣವನ್ನು ಕೊಡಲಾರದು. ಕನ್ನಡ ವಿದ್ಯಾಭಿಮಾನಿಗಳು ಇದನ್ನು ಬಹುಮುಖವಾಗಿ ಪ್ರೋತ್ಸಾಹಿಸಿ ಕೈಗೊಳ್ಳುವರೆಂದು ನಂಬಿ ಕವಿಗಳಿಗೂ ಅವರ ಕೃತಿಗೂ ಶುಭಾಶಯವನ್ನು ಕೋರಲಾಗಿದೆ.

ಗದಗ.
ದಿ. ೧೭-೧೦-೫೨

ಎಸ್. ವ್ಹಿ. ಕಲ್ಲಮಠ ಎಮ್. ಎ. ಬಿ. ಟಿ.
ಹೆಡ್ ಮಾಸ್ತರ ಮುನಸಿಪಲ್ ಹಾಯಸ್ಕೂಲ ಗದಗ.

ಶ್ರೀ ಗುರುಲಿಂಗ ಕವಿಗಳು ರಚಿಸಿದ ಚಂಪೂ ರೂಪವಾಗಿಹ 'ಬಸವಜನ್ಮ ಮಹಾಕಾವ್ಯವು' ನಿಜಕ್ಕೂ ಮಹಾಕಾವ್ಯವಾಗಿದೆ. ಸಿಂಗಿರಾಜ ಪುರಾಣದ ಕಥಾವಸ್ತುವನ್ನೇ ಮೂಲವಾಗಿಟ್ಟುಕೊಂಡು ಬರೆದ ಈ ಕಾವ್ಯವು ರಸಾತ್ಮಕವಾಗಿ ಓದುಗರ ಮನಸ್ಸನ್ನು ಹಿಡಿಯುವದಾಗಿದೆ. ಷಡಕ್ಷರಿ, ಲಕ್ಷ್ಮೀಶರಂತಹ ಮಹಾಕವಿಗಳ ಗ್ರಂಥದ ಅಭ್ಯಾಸಬಲದಿಂದ ಸಹಜವಾಗಿದ್ದ ತಮ್ಮ ಕವಿತಾಶಕ್ತಿಗೆ ಮತ್ತಿಷ್ಟು ಕಳೆಯನ್ನು ತಂದುಕೊಂಡು ಈ ಕಾವ್ಯವನ್ನು ರಚಿಸಿದ್ದನ್ನು ತಿಳಿಸಿದರೆ. ಈ ಕಾವ್ಯದಲ್ಲಿಯ ವರ್ಣನೆ ಶ್ಲೇಷಾಲಂಕಾರ ಪದಪ್ರಯೋಗ ತತ್ವವಿಚಾರ ಮೊದಲಾದವುಗಳು ಬಹುರಮಣೀಯವಾಗಿವೆ. ಎಂದು ಬುಧರು ಒಪ್ಪುವಂತಿದೆ. ಕವಿತಾ ಶೈಲಿಯು ಪುರಾತನ ಮಹಾಕವಿಗಳ ಮಾಲಿಕೆಯ ಕಡೆಗೆ ಇವರನ್ನು ಕರದೊಯ್ಯುತ್ತಿದೆ. ಒಟ್ಟಾರೆ ಈ ಕವಿಗಳ ಪ್ರಯತ್ನವು ಶ್ಲಾಘನೀಯವಾಗಿದೆ. ಹಾಗೂ ಅಭ್ಯಾಸಕ್ಕೆ ಆಧಾರವಾದ ಗ್ರಂಥವನ್ನು ಒದಗಿಸಿದ್ದಾಗಿದೆ. ಈ ಕಾವ್ಯದ ಪ್ರಭೆಯು ಸದಾ ಕನ್ನಡಿಗರ ಹೃದಯದಲ್ಲಿ ಮೂಡಲಿ ಎಂದು ನಾನು ಈ ಗ್ರಂಥಕ್ಕೂ ಕವಿಗಳಿಗೂ ಶುಭಾಶಯವನ್ನು ಕೋರುವೆ.

ಗದಗ
೨೫-೧೦-೫೨

ಕೆ. ಬಿ. ಅಂಗಡಿ.
ನಿವೃತ್ತ ವಿದ್ಯಾಖಾತೆಯ ಅಧಿಕಾರಿಗಳು ಗದಗ.

# ❋ ಅರಿಕೆ ❋

ಮಹನೀಯರೇ ನಾನು ಒಂದು ದಿವಸ ಶ್ರೀಂಗಿರಾಜ ಪುರಾಣವನ್ನು ನೋಡುತ್ತಿರುವಾಗ ಅದರ ಒಂದು ಓಲೆಯಲ್ಲಿ ಈ ವಿಷಯವು ಗದ್ಯರೂಪ ಕವಾಗಿ ಇತ್ತು ಅದನ್ನು ನೋಡಿ ನನಗೆ ಒಳ್ಳೇಆನಂದವಾಯಿತು. ಮುಂದೆ ನವಿಲುಗುಂದ ತಾಲ್ಲೂಕ ನಾಯ್ಕನೂರಲ್ಲಿ ಒಮ್ಮೆ ಬಸವಜಯಂತ್ಯುತ್ಸವವು ನೆರವೇರಿದಾಗ ಈ ವಿಷಯವನ್ನು ಭಾಷಣಮಾಡಿದೆನು ಆಗಜನರು ಹರು ಷಿತರಾದರು ಅದರಲ್ಲಿ ಮುಖ್ಯಸ್ಥರೂ ವಿದ್ವಜ್ಜನ ಸಂಪನ್ನರೂ ಆದ ಶ್ರೀ ಕಂಟೆಪ್ಪಗೌಡಾ ಕರಿಗೌಡ ಪಾಟೀಲ ಮತ್ತು ನನ್ನ ಪ್ರಿಯ ಮಿತ್ರರಾದ ವೀರಪ್ಪ ಕರಿಯಪ್ಪಾ ಅಣ್ಣಾಸಾತಪ್ಪನವರ ಎಂಬುವವರು ಈ ಬಸವಜನ್ಮ ದ ಕಾರಣವನ್ನು ಕವಿತಾರೂಪದಿಂ: ಬರೆಯುಬೇಕೆಂದು ನನಗೆ ಆಗ್ರಹ ಮಾಡಿದರು ಆದರೆ ನಾನು ಇದಕ್ಕಿಂತಲೂ ಮುಂಚಿತವಾಗಿ ಕಿರಾತಾರ್ಜುನ ರಕಾಳಗ ಸಂಪೂರ್ಣಭಾರತ, ಶ್ರೀಯಾಳಸತ್ವಪರೀಕ್ಷೆ, ಪ್ರಲ್ಹಾದ ಚರಿತ್ರೆ ಇವುಗಳನ್ನು ನಾಟಕರೂಪದಿಂದೆ ಬರೆದಿದ್ದೆನು ಅವುಗಳು ಬರೀಹಳ್ಳಿಗಳಲ್ಲಿ ಯೇ ಪ್ರಯೋಗವಾದವೇಹೊರ್ತು ಅಚ್ಚಿಗೆಪಾತ್ರವಾಗಲಿಲ್ಲಾ ವೆರ್ಥವಾಗಿ ನಾನು ಬರೆಯಲಾರೆನೆಂದು ಹೇಳಲು ಸೂಚನೆಯನ್ನು ಕೊಟ್ಟ ಪಾಟೀಲ ರು ಅಚ್ಚುಹಾಕಿಸುವ ಹೊಣೆಯನ್ನು ಹೊತ್ತರು ಈ ಮಾತಿಗೆ ನನ್ನ ತಿ॥ ರೂಪರೂ ಉತ್ತೇಜನಕೊಟ್ಟರು.

ಪಿತೃವಿನ ವಾಣಿಯೇ ವೇದವಾಣಿಯೆಂದು ತಿಳಿದು ನಾನು ಅದೇ ದಿನವೇ ಕೃತಿಗೆ ಆರಂಭಮಾಡಿದೆನು ಸಕಾಲದಲ್ಲಿ ಅದೇ ಊರಲ್ಲಿಯೇ ಶಾಲಾಗುರುಗಳಾಗಿದ್ದ ಬಿ. ಜಿ. ಹಿರೇಮಠ ಯಮನೂರು ಈಗಿನ ಶಲವಡಿ ಶಾಲಾ ಗುರುಗಳುನನಗೆ ಅನೇಕ ವಿಚಾರಗಳನ್ನು ಮನನಮಾಡಿ ಕೊಟ್ಟರು ಆಗಂತೂ ನೆನಗೆಬಹು ಸುಲಭವಾಯಿತು.

ಇದರಲ್ಲಿ ಶಕ್ಯವಿದ್ದಮಟ್ಟಿಗೆ ಶಿವಸಭಾವರ್ಣನೆ ಪ್ರಾತಃಕಾಲ ಸಂಧ್ಯಾ ಕಾಲ ಹಾಗೂ ತಮ ತಪೋವರ್ಣನೆಗಳೂ ಯುದ್ಧವರ್ಣನೆಯೂ ಮೃಗಯಾ ವಿಹಾರಸರೋವರ ರಜತಾದ್ರಿಯ ವರ್ಣನೆಯುಕಾಲಕ್ಕೆಲಕ್ಷ್ಮೀಶಷಡಕ್ಷರಕವಿ ಗಳ ಅಭಿಪ್ರಾಯವನ್ನು ದ್ವಂದ್ವಾರ್ಥವಿರುದ್ಧ ಅರ್ಥಗಳಿಂದ ತೆಗೆದುಕೊಂಡದೆ ಮತ್ತೂ ಅನಿಮಿಷನಿಗೆ ವೃಷಭಯೋಗೀಶ್ವರರಿಂದ ಅಷ್ಟಾವರಣಗಳನ್ನು

ಬೋಧಿಸುತ್ತಿರುವಾಗ ಅಲ್ಲಲ್ಲಿಗೆ ಭಕ್ತರಮನಸ್ಸನ್ನು ಆಲ್ಹಾದಗೊಳಿಸುವಂಥ ಚಿಕ್ಕ ಚಿಕ್ಕ ಕಥೆಗಳನ್ನು ವೃಷಭರಾಯನ ಕಾವ್ಯದಿಂದ ಆರಿಸಿಕೊಂಡಿರುತ್ತೇನೆ ಹಾಗೂ ಪಿಂಡಾಂಡಲಕ್ಷಣ ಷಟ್ಸ್ಥಲನಿರ್ಣಯ ಇವುಗಳನ್ನು ವಿರೂಪಾಕ್ಷ ಪಂಡಿತರ ಕಾವ್ಯದಿಂದ ಮನನಮಾಡಿಕೊಂಡು ಬರೆದಿರುವೆನು ಇದಲ್ಲದೆ ಜೀವನ್ಮುಕ್ತಿವಿಷಯ ತತ್ವಮಸಿಮಹಾವಾಕ್ಯನಿರ್ಣಯ ಷಟ್ಚಕ್ರಗಳತಾರ ತಮ್ಯವನ್ನು ಅವಧೂತಚಿದಾನಂದರ ಗ್ರಂಥದಿಂದ ಪರಿಶ್ರಮಮಾಡಿಕೊಂಡಿ ರುವೆನು ಇದರಲ್ಲಿ ಏನಾದರೂ ಭಿನ್ನಾಭಿಪ್ರಾಯಗಳು ಕಂಡುಬಂದರೆ ಪ್ರಾಜ್ಞ ರು ಸುಧಾರಿಸಿಕೊಳ್ಳಬೇಕು.

ಅಂತೂ ಇಂತೂ ಈ ಕಾವ್ಯವು ಸಮಾಪ್ತಿಯಾಗುವದರೊಳಗಾಗಿ ನನ್ನಗೆ ವಾಗ್ದಾನ ಮಾಡಿದಪಾಟೀಲರು ಶಿವಾಧೀನವಾದರು ಆಗ ನನಗೆ ಸಿಡಿಲು ಬಡಿದಂತಾಯಿತು.

ನಿರಾಶ್ರಿತವಾದ ಈಕೃತಿಯನ್ನು ನನ್ನಿಂದ ಅಚ್ಚುಹಾಕಿಸುವದು ಸಾಧ್ಯವಾಗದೇ ಮಿಡುಕುತ್ತಿದ್ದೆನು ಅದೇಕಾಲಕ್ಕೆ ಶಿವಸ್ವರೂಪರೂ ಪರೋ ಪಕಾರ ಸಮುಹೃದಯಿಗಳೂ ಅನ್ನದಾನ ಪ್ರವೀಣರೂ ಆದಗುದ್ನೇಶ್ವರ ಮಹಾಸ್ವಾಮಿಗಳು ಬಸವೇಶ್ವರನು ಕಲ್ಯಾಣಕ್ಕೆ ಬಂದಂತೆ ನಮ್ಮೂರಿಗೆ ಬಿಜಯಂಗೈಸಿದರು.

ಅವರೆದುರಿಗೆ ಈ ವಿಷಯವನ್ನು ಹೇಳಿ ಈ ಕಾವ್ಯವನ್ನು ತೋರಿಸಲು ಆಯೋಗಿವರ್ಯರು ತಕ್ಷಣವೇ ನಾನು ಅಚ್ಚುಹಾಕಿಸುತ್ತೇನೆಂದು ನನಗೆ, ಆಶೀರ್ವಾದ ಮಾಡಿ ತಮ್ಮೊಡನೇ ಇದನ್ನು ತೆಗೆದುಕೊಂಡುಹೋಗಿ ತಮ್ಮ ಸದ್ಭಕ್ತರಾದ ಅಣ್ಣೀಗೇರಿಯ ವಿರುಪಾಕ್ಷಪ್ಪನವರು ಅಂಗಡಿ ಎಂಬ ಮಹಾಶಯರಿಗೆ ಅಪ್ಪಣೆಯನ್ನು ಕೊಟ್ಟರು.

ಅವರು ತಮ್ಮ ಗದಗ ಮಲ್ಲಿಕಾರ್ಜುನ ಪ್ರಿ. ಪ್ರೆ. ದಲ್ಲಿ ತಮ್ಮ ಸಹೋದರರಾದ ಕರಬಸಪ್ಪನವರಿಂದ ತಮ್ಮ ಸ್ವಂತ ಕಾಗದದಲ್ಲಿಯೇ ಏನೊಂದೂ ಪ್ರತಿ ಫಲವಿಲ್ಲದೆ ಅಚ್ಚು ಕಟ್ಟಾಗಿ ಬೇಗನೇ ಅಚ್ಚು ಹಾಕಿಸಿಕೊಟ್ಟರು ನೋಡಿರಿ ಇದಕ್ಕಿಂತಲೂ ಇನ್ನೆಂತಹ ಉದಾತ್ತವಾದ ದಾನ ಇದರ ಹೊಣೆ ಯನ್ನು ನನ್ನ ಜೀವಮಾನದಲ್ಲಿಯೇ ತೀರಿಸಲಾರೆನು ಇವರಿಗೆ ನಾನು ಋಣಿಯಾಗಿರುವೆನು ಈ ಫಲವನ್ನು ಅವರಿಗೆ ಪೂರ್ಣಮಾಡುವವನ

ಆ ಬಸವೇಶ್ವರನೇ ಸೈ

ಇದಲ್ಲದೆ ನನಗೆ ಅನೇಕ ವಿಧದಿಂದ ಸಹಾಯವನ್ನು ನೀಡಿದವರು ಶ್ರೀಯುತ ಕೆಂಬಪ್ಪನವರು ಗೊಜನೂರು [ವ] ಲಿಂಗನಗೌಡ್ರ ಚಿಕ್ಕನಗೌಡ್ರ ದಲಾಲ ದುಕಾನ ಗದಗ ಇವರು. ಇವರ ನೆನವನ್ನು ನಾನು ಯಂದೂ ಮರೆಯಲಾರೆನು.

ಇನ್ನು ನನ್ನ ಅಜ್ಞಾತನದಲ್ಲಿ ಬರೆದಂಥ ಕಾವ್ಯದೊಳಗಿನ ದೋಷಗಳನ್ನು ಪರಿಪಡಿಸಿದವರು ಲಿಂಗಪ್ಪ ಮಾಸ್ತರ ಹೊಂಬಳ ಮುನಿಸಿಪಲ್ ಪ್ರಾಥಮಿಕ ಶಾಲೆಯ ಗುರುಗಳು ಇವರಿಗಂತೂ ನಾನು ಅತ್ಯಂತ ಕೃತಜ್ಞನು.

ಈ ಕಾವ್ಯಕ್ಕೆ ಮುನ್ನುಡಿಯನ್ನೂ ತಮ್ಮ ತಮ್ಮ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿ ಅಲಂಕಾರ ಮಾಡಿ ಕವಿವೃಂದದಲ್ಲಿ ನನ್ನಂಥ ಅಲ್ಪನನ್ನು ಸೇರಿಸಿದ್ದಕ್ಕಾಗಿ ಪಂ। ನಾಗಭೂಷಣ ಶಾಸ್ತ್ರಿಗಳು ಅಖಿಲಭಾರತ ವೀರಶೈವ ವಿದ್ಯಾಪೀಠದ ಕಾರ್ಯಾಧ್ಯಕ್ಷರು ಮತ್ತು ಸಾವಧಾನ ಸಂಪಾದಕರೂ ಗದಗ ಹಾಗೂ ಆ. ಮ. ಪಾಟೀಲ ಬಿ. ಎ. ಮು. ಮಾಧ್ಯಮಿಕ ಶಾಲಾಶಿಕ್ಷಕ ಗದಗ ಆಯ್. ಡಿ. ಅಣ್ಣಿಗೇರಿ. ದೇವೀಹೊಸೂರ ಶಾಲಾ ಗುರುಗಳು ಶ್ರೀ ಎಸ್. ವ್ಹಿ. ಕಲ್ಮಠ. ಎಂ. ಎ. ಬಿ. ಟಿ. ಇವರಿಗೆ ನನ್ನ ಅನಂತ ವಂದನೆಗಳು.

ಗ್ರಂಥಕರ್ತ,

**ಗುರುಲಿಂಗಪ್ಪ ಶಾಂತವೀರಪ್ಪ ಹಂಪಸಾಗರ [ಕುರ್ತಕೋಟಿ]**



ಈ ಗ್ರಂಥವನ್ನು ಕೆ. ಆಯ್. ಅಂಗಡಿ. ಇವರ ಗದಗ ಮಲ್ಲಿ ಕರ್ನಾಟಕ ಮುದ್ರಣದಲ್ಲಿ ಮುದ್ರಿಸಿ, ಗ್ರಂಥಕರ್ತನಾದ ಗುರಲಿಂಗಪ್ಪ ಶಾಂತವೀರಪ್ಪ ಕುರ್ತಕೋಟಿ ಸಾ॥ ನಾಯಕನೂರ ತಾಲ್ಲೂಕು ನವಲಗುಂದ ಇವರಿಂದಲೇ ಪ್ರಕಾಶಿಸಿ ಇವರ ನಾಯಕನೂರ ಗ್ರಾಮದಲ್ಲಿರುವ ಸ್ವಗೃಹದಲ್ಲಿಯೇ ಪ್ರಸಿದ್ಧಿಸಲ್ಪಟ್ಟಿತು.



# ಮಹನೀಯರ ಅಭಿಪ್ರಾಯಗಳು

ಶಿವಶರಣರ ಶುಭಚರಿತ್ರೆಗಳೂ ಅವರ ಶಿವಾನುಭವವಚನಗಳೂ ಹೆಚ್ಚು ಪ್ರಚಾರದಲ್ಲಿದ್ದುದರಿಂದ ಹಿಂದಕ್ಕೆ ಬಸವಾದಿಪ್ರಮುಥರು ನಡೆದು ನುಡಿದ ಮಾರ್ಗದಂತೆ ಪ್ರತಿಯೊಬ್ಬ ವೀರಶೈವನು ತನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಶಿವಭಾವನೆಯನ್ನು ತಾಳಿದ್ದನು. ಇದರಿಂದ ಶಿವಸಾಮ್ರಾಜ್ಯವೇ ಅಗ್ಗಿ ಪಸರಿಸಿತ್ತು. ಲಿಂಗಾಂಗಿಗಳ ಮಠ ಮಠಗಳಲ್ಲಿ ಶಿವಶರಣರುದಿಸಿದರು. ಆದರೆ ಇತ್ತೀಚೆಗೆ ಉತ್ತೇಜನವಿಲ್ಲದ್ದ ರಿಂದ ಇಂಥ ಶುಭಚರಿತ್ರೆಗಳೂ ವಚನಗಳೂ ಸಾಕಷ್ಟು ಹಬ್ಬದ್ದರಿಂದ ಈಗ ಬಹುಜನರು " ನನಗಿಂತ ಹಿರಿಯರಿಲ್ಲ ಶಿವಭಕ್ತರಿಗಿಂತ ಕಿರಿಯರಿಲ್ಲ ಎಂಬ ವಿಪರೀತ ಕಲ್ಪನೆ ತಾಳುವಂತಾಗಿ ಇದ್ದ ಸ್ವಲ್ಪ ಶಿವಶರಣರು ಮೌನ ತಾಳಿರುವರು. ಸಮಾಜದಲ್ಲಿ ಸ್ವಾರ್ಥವು ತಾಂಡವವಾಡುತ್ತಿದ್ದುದರಿಂದ ಅದು ಛಿದ್ರಛಿದ್ರವಾಗಿ ಶಕ್ತಿಗುಂದಿದೆ. ಪರರ ತಿರಸ್ಕಾರಕ್ಕೆ ಒಳಗಾಗಿದೆ.

ಸಮಾಜದಲ್ಲಿ ಸಮತಾಭಾವವನ್ನು ಪುನರುಜ್ಜೀವನಗೊಳಿಸುವಲ್ಲಿ ಅಗ್ರಸ್ಥಾನದಲ್ಲಿದ್ದ ಜಗದಾದಿದೇಶಿಕ ಬಸವೇಶ್ವರನ ಚರಿತ್ರೆಯಾದ ಈ ಚಂಪೂಗ್ರಂಥಸೂರ್ಯೋದಯದಿಂದ ಒಂದೇ ಸಮಾಜದಲ್ಲಿ ಜನ್ಮತಃ ಮೇಲುಕೀಳನ್ನು ಹೇಳುವ ವರ್ಣಾಶ್ರಮಬೋಧಕಸಾಹಿತ್ಯತಮಸ್ಸು ಹರಿದು ಹೋಗದಿರದು.

ವಿದ್ಯಾರ್ಥಿವೃಂದವು ಇದರ ಸದುಪಯೋಗವನ್ನು ಮಾಡಿಕೊಳ್ಳುವಂತೆ ವಿದ್ಯಾಧಿಕಾರಿಗಳು ಪ್ರೋತ್ಸಾಹಿಸುವರೆಂದು ನೆರೆನಂಬಲಾಗಿದೆ.

ಕನ್ನಡ ೭ನೇ ಇಯತ್ತೆಯನ್ನು ಮಾತ್ರ ಮುಗಿಸಿದ ಶಿ. ಶ. ಗುರುಲಿಂಗಕವಿಗಳಲ್ಲಿ ವರಕವಿತ್ವವಿದ್ದದ್ದರಿಂದಲೇ ಇಂಥ ದೊಡ್ಡ ಚಂಪೂರತ್ನವನ್ನಲ್ಲದೇ ೪-೬ ನಾಟಕಗಳನ್ನು ಬರೆಯುವ ಸಹಜ ಶಕ್ತಿಯು ಆ ಬಸವ ಮಹಾತ್ಮನ ಅನುಗ್ರಹದಿಂದಲೇ ಇವರಿಗೆ ಪ್ರಾಪ್ತವಾಗಿದೆ. ಇನ್ನಾದರೂ ಅದೇ ಭಕ್ತಜನಭಾಗ್ಯ ಬಸವೇಶನೇ ಗ್ರಂಥಕಾರರಿಗೆ ದೀರ್ಘಾಯುವನ್ನು

ದಯಪಾಲಿಸಿ ಇಂಥ ಅನೇಕ ಸಮಾಜಹಿತಸಾಧಕಗ್ರಂಥಗಳನ್ನು ಬರಿಯುವ ಶಕ್ತಿಯನ್ನೂ, ಅನುಕೂಲತೆಯನ್ನೂ ದಯಪಾಲಿಸಲೆಂದು ಹಾರೈಸುವೆನು.

ಭಕ್ತಜನಬಂಧು

ದಿ. ೨೫-೯-೫೩ ಅ. ಮ. ಪಾಟೀಲ ಬಿ. ಏ.

ಮು. ಮಾಧ್ಯಮಿಕ ಶಾಲಾ ಶಿಕ್ಷಕರು. ಗದಗ.

ಈ ಗುರುಲಿಂಗ ಕವಿಗಳ ಸತ್ಕಾವ್ಯವನ್ನು ನೋಡಿ ಆನಂದಸಾಗರದಲ್ಲಿ ಮುಳುಗಿದೆನು ಈ ಚಂಪೂರತ್ನವು ಗಾಂಭೀರ್ಯವದೆ ಮಾಧುರ್ಯವದೆ. ಪೂರ್ವದಕವಿಗಳ ಅಭಿಪ್ರಾಯದಂತೆ ಉಪಮಾನೋಪಮೇಯಗಳಿಂದಲಂಕೃತವಾಗಿದೆ, ವೀರಶೈವದಗುಟ್ಟು, ಅನುಭವದವಿಚಾರಗಳು ಅಲ್ಲಲ್ಲಿಗೆ ಮನವಾರೆ ಬಣ್ಣಿಸಲಾಗಿದೆ. ಈ ಸನ್ಮಾನ್ಯರ ಕಾವ್ಯಕ್ಕೆ ಬೇಗನೆ ವಿಜಯದೊರೆಯಲೆಂದು ದೇವರನ್ನು ಪ್ರಾರ್ಥಿಸುವೆ.

ಆಯ್. ಡಿ. ಅಣ್ಣೀಗೇರಿ.

ದೇವಿಹೊಸೂರ ಶಾಲಾಶಿಕ್ಷಕರು.



ಈ ಗ್ರಂಥವು ಮಲ್ಲಿಕಾರ್ಜುನ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿ ಲೇಖಕರೂ ಮತ್ತು ಪಬ್ಲಿಶರರೂ ಆದ ಗುರಲಿಂಗಪ್ಪ ಶಾಂತವೀರಪ್ಪ ಕುರ್ತಕೋಟಿ ಸಾ॥ ನಾಯಕನೂರ ತಾ॥ ನವಲಗುಂದ ಜಿಲ್ಹಾ ಧಾರವಾಡ ಯವರು ತಮ್ಮ ನಾಯಕನೂರ ಗ್ರಾಮದಲ್ಲಿಯೇ ಪ್ರಸಿದ್ಧಿಸಿರುತ್ತಾರೆ.



## ....★ ಕಥಾ ಸಾರಾಂಶ ★....

ಪರಮೇಶ್ವರನು ಒಂದುದಿನ ತನ್ನ ಒಡ್ಡೋಲಗದಲ್ಲಿರುವಾಗ ಇಂದ್ರಾದ್ಯಷ್ಟದಿಕ್ಪಾಲಕರೂ ಬ್ರಹ್ಮ ವಿಷ್ಣು ಮೊದಲಾದವರು ಯಕ್ಷಕಿನ್ನರ ಕಿಂಪುರುಷರೆಲ್ಲರು ದೇವಾಧಿದೇವನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ಹೋಗುತ್ತಿದ್ದರು.

ಆಗ ಶಿವನಿಗೆ ಆಭರಣನಾದ ಶೇಷನು ಶಿವನಸಂಗಮಹಿಮೆಯನ್ನು ಕೊಂಡಾಡಿ ಆ ದೇವನನ್ನು ಹೊಗಳಿದನು. ಅಷ್ಟರಲ್ಲಿ ದ್ವಿತೀಯ ಶಂಭುವೆನಿಸಿದ ನಂದೀಶ್ವರನು ದೇವದೇವಗೆ ಪ್ರದಕ್ಷಣೆ ಹಾಕಿ ಆತನ ಪಾದದಲ್ಲಿ ಮಲಗಲು ಬಸವೇಶ್ವರನು ಮಲಗಿದರೀತಿಯನ್ನು ನಾರಾಯಣನು ಶಿವನಿಗೆ ತೋರಿಸಿ ಇದರಇಂಗಿತವೇನೆಂದು ಕೇಳಲು ಗಿರಿಜಾಧವನು ಧರ್ಮಸ್ವರೂಪನಾದ ನಂದೀಶನು ಜಗತ್ತಿಕ್ಕೆ ಗುರುರೂಪಕನಾಗಿ ತನ್ನ ಅಂಗಚಲನ ವಲನದಿಂದ ಸನ್ಮಾರ್ಗ ಬೋಧೆಯನ್ನು ಗೈಯ್ಯುವನೆಂದು ಹೇಳಿದನು.

ಈ ರೀತಿಯನ್ನುಕೇಳಿ ದೇವೇಂದ್ರನು ನಾನು ಎಲ್ಲಾದೇವತೆಗಳಿಗಿಂತಲೂ ಹೀನನೆಂದು ಭಾವಿಸಿ ನನ್ನ ಕಡೆಗೆ ತನ್ನ ಬಾಲವನ್ನಿಟ್ಟು ನಂದಿಯು ಮಲಗಿಹನೆಂದು ತಿಳಿದು ಸಿಟ್ಟಿನಿಂದ ಅದರಲ್ಲಿಯ ಒಂದು ರೋಮವನ್ನು ಕಿ ೯ ಳ್ದ ನು .

ಆಗ ನಂದೀಶ್ವರನು ಒಂದು ರೋಮದ ನಾಶವಾದಕಾಲಕ್ಕೆ ಅದರಲ್ಲಿ ಅಡಗಿದ ಒಂದು ಕೋಟಿ ಲಿಂಗಗಳು ನಾಶವಾದವೆಂದು ಶಿವಸಭೆಯನ್ನು ಬಿಟ್ಟು ಕತ್ತಲೆಯಲ್ಲಿಯೇ ಬಹುದುಃಖದಿಂದ ಕಾಡಿಗೆ ಹೋದನು.

ಶಿವಧರ್ಮವೇ ಗುಪ್ತವಾಗಿರುವ ಸಮಯದಲ್ಲಿ ಜಗತ್ತಿಕ್ಕೆ ನಾನೆಂತು ಮುಖ ತೋರಿಸಲಿಯೆಂದು ಸೂರ್ಯನಾರಾಯಣನು ಉದಯವಾಗಲಿಲ್ಲವು ಆಗ ಅಹೋರಾತ್ರಿಗಳು ಎಣಿಸದಷ್ಟು ಗತವಾಗಲು ನಿರ್ಜರರೆಲ್ಲರೂ ಅಂಜಿ ಬ್ರಹ್ಮಹರಿಗಳನ್ನೊಳಗೊಂಡು ಶಂಕರಂಗೆ ಮೊರೆಯಿಟ್ಟರು ಆಗಲವನು ಸಿಟ್ಟಿನಿಂದ ಇಂದ್ರನನ್ನು ಕರೆದು ನೀನುಮಾಡಿದ ಅವಮಾನಕ್ಕೆ ಖೇದಗೊಂಡು ಹೋದನಂದೀಶನನ್ನು ವಿನಯದಿಂದ ಕರತರುವದೆಂದಪ್ಪಣೆಯಿತ್ತು ನಯನರವಿಯಿಂದ ಬೆಳಕನ್ನುಂಟು ಮಾಡಿದನು.

ಮದಾಂಧನಾದ ಸುತ್ರಾಮನು ನಂದೀಶ್ವರನಿಗೆ ಬಾಗುವದನುಚಿತ ವೆಂದು ಆತನೊಡನೆ ಖಾಡಾಖಾಡಿಯುದ್ಧ ಮಾಡಿ ಪರಾಜಿತನಾಗಿ ಶಿವ ನಿಂದ ಶಾಪಹೊಂದಿ ಪಟ್ಟದಕಲ್ಲಪುರದ ಲೋಕ ಚೂಡಾರತ್ನರಾಯನ ಉದರದಲ್ಲಿ ಜನಿಸಿದನು.

ನಂದಿಯಕೋಪವು ಶಾಂತವಾಗದೆ ಭೂಮಿಯನ್ನು ಘಾಶಿಗೊಳಿಸಲು ಭೂದೇವಿಯು ರಜತಾದ್ರಿಯಲ್ಲಿ ಪರಮಾತ್ಮನಿಗೆ ಬೀರಲು ಆತನು ಅಗಸ್ತ್ಯ ರುಷಿಗಳ ಬಳಿಗೆ ಕಳುಹಿದನು ಆ ಮುನಿಪನು ಬಸವಧ್ಯಾನ ರಹಸ್ಯವನ್ನು ಬೋಧಿಸಲು ಅದರಿಂದ ನಂದಿಯನ್ನೊಲಿಸಿ ತನ್ನ ಸ್ಥಾನಕ್ಕೆ ಭೂದೇವಿಯು ನಂದಿಯನ್ನು ತರಲು ಆತನು ಸಿದ್ಧಾದ್ರಿಯಲ್ಲಿ ತಪಸ್ಸುಮಾಡುತ್ತಿದ್ದನು.

ಇತ್ತ ಅನಿಮಿಷನು ವಿದ್ಯಾಭೂಷಿತನಾಗಿ ಪ್ರಜಾಪರಿಪಾಲನೆ ಮಾಡು ತ್ತಿರುವಾಗ ವೃಷಭಯೋಗೀಶ್ವರರೆಂಬ ಮಹಾಯೋಗಿಗಳು ಬರಲು ಅವ ರಿಂದ ಅಷ್ಟಾವರಣ ಬೋಧೆಯನ್ನುಕೇಳಿದೀಕ್ಷೆಯನ್ನು ಪಡೆದನು.

ಕೆಲವು ಕಾಲದಮೇಲೆ ಅನಿಮಿಷನು ಮೃಗಯಾ ವಿಹಾರಕ್ಕೆಂದು ಕಾನ ನಕ್ಕೆ ಪೋದಾಗ ಕಿನ್ನರ ಮಿಥುನಗಳನ್ನು ಬೆಂಬಳಿಸಿ ತನ್ನ ಸೈನ್ಯವನ್ನು ಬಿಟ್ಟು ಏಕಾಂಗಿಯಾಗಿಬಸವನುಯೋಗಮಾಡುವಸಿದ್ಧಾದ್ರಿಯನ್ನು ಕಂಡನು

ಅಲ್ಲಿ ಅವನಿಗೆ ಘನವಾದ ತೃಷೆಬಾಧೆಯಾಗಲು ಪ್ರಯಾಸದಿಂದ ಒಂದುಸರೋವರವನ್ನು ಹುಡುಕಿನೀರುಕುಡಿಯಬೇಕೆನ್ನುವಷ್ಟರಲ್ಲಿಶಿವಲಿಂಗ ದರ್ಶನವಿಲ್ಲದೆ ಅನ್ನಪಾನಗಳನ್ನು ಕೊಳ್ಳಬೇಡೆಂದು ಹೇಳಿದ ಸದ್ಗುರುವಿನ ಬೋಧೆಯು ಸ್ಮರಣಕ್ಕೆ ಬಂತು.

ಇಂತಹವಿಪತ್ತಿನಲ್ಲಿ ಅವನು ಆನೀರನ್ನು ಚಲ್ಲಿ ಶಿವಲಿಂಗಶೋಧನೆಗೆ ಹೊರಟು ಎಲ್ಲಿಹುಡುಕಿದರೂ ಕಾಣದೆ ಇರಲು ತನ್ನ ಪ್ರಾಣಕ್ಕಿಂತ ಗುರು ವಚನವೇ ಅಧಿಕವೆಂದು ಪ್ರಾಣವನ್ನುಬಿಡಲುದ್ಯುಕ್ತನಾದನು.

ಅಲ್ಲಿಯೇ ಒಂದು ಚೂತದಡಿಯಲ್ಲಿ ಮಲಗಿದನಂದೀಶ್ವರನು ಇವನ ತಾಪವನ್ನು ಸೈರಿಸಲಾರದೆ ತನ್ನ ಇಷ್ಟಲಿಂಗವನ್ನು ಅನಿಮಿಷನ ಹಸ್ತದಲ್ಲಿ ರಿಸಿದನು.

ಆ ಲಿಂಗವು ಸ್ಪರ್ಶವಾದೊಡನೆಯೇ ಸುತ್ರಾಮನಿಗೆ ಪೂರ್ವದ ಅರಿವು ಉಂಟಾಗಿ ಬಸವನ ಇಷ್ಟಲಿಂಗವನ್ನು ನಾನು ತೆಗೆದುಕೊಂಡು ಹೋದರೆ

ತಾನಾಗಿಯೇ ಕೈಲಾಸಕ್ಕೆ ಬರುವನೆಂದು ಮನಸಿನಲ್ಲಿ ವಿಚಾರಿಸಿ ಲಿಂಗ ದೊಡನೆ ಕೈಲಾಸಕ್ಕೆ ಹೋದನು.

ಲಿಂಗವನ್ನಗಲಿದ ನಂದೀಶನು ಬಹು ಸಂತಾಪದಿಂದ ಶಿವಸಭೆಯುವ ರಿವಿಗೂ ಹೋಗಬೇಕಾಯಿತು.

ಅಷ್ಟರಲ್ಲಿ ಶಿವಸಭೆಯೊಳಗೆ ನಾರದನು ಬಂದು ಭೂಲೋಕದಲ್ಲಿ ಶಿವ ಧರ್ಮವು ಪಲಾಯನ ಗೊಂಡಿರುವದು ಆದರ ಉದ್ಧಾರಕ್ಕಾಗಿ ನಂದಿಯನ್ನು ಭೂಲೋಕಕ್ಕೆ ಕಳಿಸಿಕೊಡಬೇಕೆಂದು ಶಂಕರನಿಗೆ ಬೇಡಿಕೊಳ್ಳಲು ನನ್ನ ಪ್ರಾಣಸ್ವರೂಪ ನಂದೀಶನನ್ನು ಅಗಲಿನಾನಿರಲಾರೆನಾದ್ದರಿಂದ ಕಳಿಸುವದಿಲ್ಲ ವೆಂದು ಹೇಳಿದಶಿವನಮಾತಿನಿಂದ ರೊಚ್ಚಿಗೆದ್ದು ನಾರದನು ತಂತ್ರ ಹೂಡಿದನು ಶೋಕದಿಂದ ಶಿವಸಭೆಗೆ ಬಂದ ನಂದಿಯನ್ನು ದ್ವಾರಪಾಲಕರಾದ ಜಯವಿಜಯರು ಬಾಗಿಲದಲ್ಲಿಯೇ ನಿಲ್ಲಿಸಿದರು ಶಿವನು ಓಡಿಬಂದು ನಂದಿ ಯನ್ನಾಲಿಂಗಿಸ ಹೋಗಲು ಲಿಂಗವಿಲ್ಲದ ಭವಿಯ ಅಂಗಸ್ಪರ್ಶವು ಅನು ಚಿತವೆಂದು ನಾರದನು ಶಿವಸಭೆಯಲ್ಲಿ ವಾದಮಾಡಿಗೆಲೆದನು.

ನಿರುಪಾಯನಾದ ಈಶ್ವರನು ನಂದಿಯನ್ನು ಬಾಗೇವಾಡಿಯಲ್ಲಿ ಮಾದರಸ ಮಾದಲಾಂಬಿಕೆಯರ ಪುತ್ರನಾಗಿಹುಟ್ಟಲು ಅಪ್ಪಣೆಕೊಟ್ಟನು. ನಂದೀಶನು ಪಿಂಡಾಂಡದ ಲಕ್ಷಣವನ್ನು ನೆನಿಸಿ ಯೋನಿಮುಖದಲ್ಲಿ ಜನಿಸಲಾರೆನೆಂದು ದುಃಖಿಸಲು ಅಯೋನಿಜನನ್ನಾಗಿ ಪುಟ್ಟಿಸುವೆನೆಂದು ಹೇಳಲು ನನಗೆ ಇಷ್ಟಲಿಂಗ ದಯಪಾಲಿಸರೆನಲು ನಾನೇನಿನ್ನುರದೊಳಗೆ ಧರಿಸುವೆನೆಂದು ಸಂತೈಸಿದನು.

ಆಗ ಬಸವನು ತನ್ನ ಜನ್ಮಉದ್ಧಾರಕ್ಕಾಗಿ ಈಶ್ವರನಿಂದ ಷಟ್ಸ್ಥಲ ಬೋಧೆ ಜೀವನ್ಮುಕ್ತಿ ವಿಷಯವನ್ನು ಅರಿತುಕೊಂಡು ಅಕ್ಷಯತೃತೀಯದ ದಿವಸ ಭೂಮಿಯಲ್ಲಿ ಅವತರಿಸಿದನು.

ಕಲ್ಯಾಣ ಪಟ್ಟಣವು ನಮ್ಮ ಕೈಲಾಸನಗರ]

#  ಮುನ್ನುಡಿ 

ಸಾಹಿತ್ಯವು ಜನಜೀವನವನ್ನು ಹದಗೊಳಿಸಿ ಅದಕ್ಕೊಂದು ಉತ್ತಮ ಸ್ಥಿತಿಯನ್ನುಂಟು ಮಾಡಬಲ್ಲ ಶ್ರೇಷ್ಠ ರಸಾಯನವಾಗಿರುವದು. ರಸಿಕ ಕವಿಗಳು ಸಾಹಿತ್ಯವನ್ನು ಕಾಂತಾಸಂಮಿತವೆಂದು ಹೇಳಿದ್ದುಂಟು ಅಂಥ ಸಾಹಿತ್ಯದಿಂದ ಜನಜೀವನವನ್ನು ತಿದ್ದಿ ತೀಡಿ ಸರಿ ಪಡಿಸಲು ಅನುಕೂಲ ವಾಗುವದೆಂಬ ಸದುದ್ದೇಶದಿಂದಲೇ ಹಿಂದೆ ಅನೇಕ ಕವಿಗಳು ಸಾಹಿತ್ಯ ಕ್ಷೇತ್ರದಲ್ಲಿ ನಿಂತುಕೊಂಡು ತಮ್ಮ ಅಮೋಘವಾದ ಸೇವೆಯನ್ನು ಸಲ್ಲಿಸಿ ಅಮರಜೀವಿಗಳಾಗಿರುವರು. ಜನಜೀವನ ಶಕ್ತಿಯನ್ನು ಉಳಿಸಿ ಬೆಳಿಸಿ ಬೆಳಗಿಸಲು ಯಾವಸಾಹಿತ್ಯವು ಎಷ್ಟು ಸಹಾಯವನ್ನು ಮಾಡಬಲ್ಲದೋ ಆಸಾಹಿತ್ಯವು ಅಷ್ಟು ಶ್ರೇಷ್ಠ ವೆನಿಸುವದೆಂಬುವದರಲ್ಲಿ ಯಾರ ಮತಭೇದವಿ ರುವದಿಲ್ಲ. ಜನಾಂಗದ ಮೇಲು ಕೀಳುಗಳ ಕಲ್ಪನೆಯು ಕೂಡಾ ಸಾಹಿ ತ್ಯದಿಂದಲೇ ಆಗಬಲ್ಲದು. ಯಾಕಂದರೆ ಸಾಹಿತ್ಯವು ಜನಜೀವನದ ಪ್ರತಿ ಬಿಂಬವೇ ಆಗಿರುತ್ತದೆ. ಅಂತೆಯೇ ಜನತೆಯಲ್ಲಿ ಸುಪ್ತವಾಗಿದ್ದ ಚೈತನ್ಯ ವನ್ನು ಬಡಿದೆಬ್ಬಿಸಬಲ್ಲ ಕಲಾಪೂರ್ಣವಾದ ಸಾಹಿತ್ಯವನ್ನು ನಿರ್ಮಿಸುವ ಕವಿಗಳು ಯಾವಾಗಲೂ ಜನತೆಯ ಗೌರವಾದರಗಳಿಗೆ ಪಾತ್ರರಾಗುವರು.

ಕವಿಗಳೆಂದರೆ ಕ್ರಾಂತದರ್ಶಿಗಳು. ಅವರ ದೃಷ್ಟಿಯು ಸಾಮಾನ್ಯರ ದೃಷ್ಟಿಗಿಂತ ವಿಲಕ್ಷಣವಾಗಿರುತ್ತದೆ, ಸ್ಥೂಲಇಂದ್ರಿಯಗಳಿಗೆ ಗೋಚರವಾ ಗದ ಎಷ್ಟೋ ವಿಷಯಗಳನ್ನು ಕವಿಗಳಾದವರು ಗ್ರಹಣಮಾಡಬಲ್ಲರು. ಅವನ್ನೇ ಸಾಹಿತ್ಯಮುಖವಾಗಿ ಜನತೆಯ ಮುಂದಿಡಬಲ್ಲರು. ಕವಿಗಳಿಗೆ ಋಷಿಗಳೆಂದೂ ಹೇಳುವ ಸಂಪ್ರದಾಯವಿದೆ.

ನಮ್ಮ ಕನ್ನಡನಾಡಿನಲ್ಲಿ ಹಿಂದೆ ಎಷ್ಟೋಜನ ಕವಿಗಳಾಗಿ ಹೋಗಿ ದ್ದಾರೆ. ಅವರನ್ನು ಜೈನ, ಬ್ರಾಹ್ಮಣ, ವೀರಶೈವ ಕವಿಗಳೆಂದು ವಿಭಾಗಿಸಿ ಹೇಳಬಹುದಾದರೂ ಅವರನ್ನೆಲ್ಲಾ ಕನ್ನಡಕವಿಗಳೆಂದು ಹೇಳುವದೇ ಹೆಚ್ಚು ಸಮಂಜಸವಾಗಿ ಕಂಡು ಬರುತ್ತದೆ. ಆದರೂ ಅವರವರ ಸಾಹಿತ್ಯ ನಿರ್ಮಾಣದ ಧ್ಯೇಯಧೋರಣೆಗಳಿಂದ ಅದರಲ್ಲಿ ತಾರತಮ್ಯ ಭಾವವು ಸಹಜ ವಾಗಿಯೇ ಉಂಟಾಗುವದು.

ಮೊದಲು ಗ್ರಾಮ್ಯವಾಗಿದ್ದ ಕನ್ನಡ ಭಾಷೆಯನ್ನು ಗ್ರಂಥಸ್ಥವನ್ನಾಗಿ ಮಾಡಿದವರು ಜೈನಕವಿಗಳು. ಅವರಲ್ಲಿ ಪಂಪ, ರನ್ನ, ನಾಗಚಂದ್ರ, ಜನ್ನ ಮುಂತಾದವರು ಮುಖ್ಯರು. ಪಂಪನ ಆದಿಪುರಾಣ. ವಿಕ್ರಮಾರ್ಜುನ ವಿಜಯ, ರನ್ನನ ಅಜಿತಪುರಾಣ, ಗದಾಯುದ್ಧ ಎಂಬ ಕಾವ್ಯಗಳು ಇಂದಿನ ಸಾಹಿತಿಗಳ ಮೆಚ್ಚುಗೆಗೆ ಪಾತ್ರವಾಗಿವೆ. ಇದರಂತೆ ಶಿಶು ಮಾಯಣ ರತ್ನಾಕರವರ್ಣಿ ಮುಂತಾದ ಜೈನ ಕವಿಗಳ ಕೃತಿಗಳು ಕನ್ನಡ ಸಾಹಿತ್ಯೋದ್ಯಾನದಲ್ಲಿ ಮನಮೋಹಕ ಪುಷ್ಪಗಳಾಗಿ ಒಪ್ಪುತ್ತಿರುವವು.

ಹನ್ನೆರಡನೆಯ ಶತಮಾನದಹೊತ್ತಿಗೆ ವೀರಶೈವ ಕವಿಗಳು ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಅಷ್ಟೇಅಲ್ಲ ಸಾಹಿತ್ಯಕ್ಷೇತ್ರದಲ್ಲೂ ಅಭೂತಪೂರ್ವವಾದ ಕ್ರಾಂತಿಯನ್ನೆಸಗಿ ಜನಜೀವನದಮೇಲೆ ಮಹಾಪ್ರಭಾವವನ್ನು ಬೀರಿದರು. ಆಗ ಕನ್ನಡ ಸಾಹಿತ್ಯದೇವಿಯ ನಿಸರ್ಗ ಸೌಂದರ್ಯವನ್ನು ಕಂಡು ಎಲ್ಲರೂ ಆನಂದ ಪಡುವಂತಾಯಿತು.

ಜೈನಕವಿಗಳ ಕಾಲದಲ್ಲಿ ಪಂಡಿತರ ಸ್ವತ್ತಾಗಿ ಭೋಗಿಗಳ ಅರಮನೆಯ ಏಕಾಂತ ವಾಸವನ್ನು ಮಾಡುತ್ತಲಿದ್ದ ಕನ್ನಡ ಸಾಹಿತ್ಯದೇವಿಯನ್ನು ಬಡವರ ಗುಡಿಸಲದವರೆಗೂ ಬರಮಾಡಿಕೊಂಡು ಆಕೆಯ ಸ್ವಾಭಾವಿಕ ಸೌಂದರ್ಯಲಾವಣ್ಯಗಳನ್ನು ಎಲ್ಲರಿಗೂ ದರ್ಶನಮಾಡಿಸಿ ಕೊಟ್ಟ ಶ್ರೇಯಸ್ಸಿಗೆ ವೀರಶೈವಕವಿಗಳೇ ಪಾತ್ರರು.

“ ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರಮೇಲೆವಿದ್ಯವಂ ।
ತನತನಗಿಂದ್ರ ಚಂದ್ರಕವಿ ಕರ್ಣದಧೀಚಿ ಬಲೀಂದ್ರನೆಂದುತಾ ।
ನನವರತಂ ಪೊಗಳ್ದು ಕೆಡಬೇಡೆಲೆಮಾನವ ನೀನಹರ್ನಿಶಂ ।
ನೆನೆಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನಹಂಪೆಯಾಳ್ದನಂ ॥ ”

ಎಂಬಹರಿಹರನ ವಾಣಿಯು ಎಲ್ಲಕಡೆಗೂ ಕ್ರಾಂತಿಯ ಕಿಡಿಗಳನ್ನು ಗುಳಿ ಸಾಹಿತಿಗಳ ಮನಪರಿವರ್ತನಮಾಡಿ ಬಿಟ್ಟಿತು.

ಸಾಮಾನ್ಯರ ಬುದ್ಧಿಗೆ ರಾಜಮಹಾರಾಜರು ಬಹಳ ದೊಡ್ಡವರಾಗಿ ಕಂಡುಬರುತ್ತಾರೆ. ಭೋಗಜೀವನಕ್ಕೆ ಅವರು ಮಹತ್ವಕೊಡತ್ತಿರುವದೇ ಇದಕ್ಕೆ ಮೂಲಕಾರಣವಾಗಿರುವದು. ಅಂದಮೇಲೆ ಅಂಥ ಭೋಗಸಾಮಗ್ರಿಗಳನ್ನು ಯಥೇಚ್ಛವಾಗಿ ಕೂಡಹಾಕಿಕೊಂಡು ಅವುಗಳ ಭೋಗತೆಗೆದು

ಕೊಳ್ಳುವವರು ಅವರ ದೃಷ್ಟಿಯಲ್ಲಿ ದೊಡ್ಡವರಾಗಿಕಂಡುಬಂದರೆ ಆಶ್ಚರ್ಯವೇನು ? ಅದಕ್ಕಾಗಿಯೇ ಭೋಗವಿಲಾಸಾಪೇಕ್ಷಿಗಳಾದ ಕೆಲವು ಕೀಳುಮಟ್ಟದ ಕವಿಗಳು ರಾಜಮಹಾರಾಜರನ್ನು ಇಂದ್ರ ಚಂದ್ರರೆಂದು ಮನವಾರೆಬಣ್ಣಿಸಿ ತಮ್ಮ ಮನೋವಾಸನೆಗಳನ್ನು ತೃಪ್ತಿಗೊಳಿಸಲು ಹವಣಿಸಿದ್ದುಂಟು. ಆದರೆ ಶಿವಕವಿಗಳು ನರರನ್ನು ಸುರರನ್ನು ಹೊಗಳಿ ದೇವದತ್ತವಾದ ಕವಿತ್ವಶಕ್ತಿಯನ್ನು ದುರುಪಯೋಗ ಮಾಡಿಕೊಳ್ಳಲು ಮನಸ್ಸುಗೊಡದೆ ಶಿವನನ್ನು ಶಿವಭಕ್ತರನ್ನು ಹೊಗಳಿ ತಮ್ಮ ಜೀವನವನ್ನು ಸಾರ್ಥಕಮಾಡಿಕೊಳ್ಳಲು ಹೆಣಗಿರುವರು. ಅಂಥಶಿವಕವಿಗಳ ಮಾರ್ಗವನ್ನೇ ಅವಲಂಬಿಸಿಕೊಂಡು ಇಲ್ಲಿಯವರೆಗೂ ಲಿಂಗವಂತಕವಿಗಳು ಬಂದಿದ್ದಾರೆ.

ಅದೇ ಶಿವಕವಿಗಳ ಮಾರ್ಗವನ್ನು ಗುರುಲಿಂಗಕವಿಗಳು ಅನುಸರಿಸಿ ವೀರಶೈವಧರ್ಮನಿರ್ಣಯಪರಮಾವತಾರ, ಪ್ರಥಮಾಚಾರ್ಯ, ಆದಿದೀಕ್ಷಾಗುರು ಎನಿಸಿಕೊಂಡ ಬಸವಣ್ಣನ ಜನ್ಮವನ್ನು ನಿರೂಪಿಸುವ " **ಬಸವಜನ್ಮ ಮಹಾಕಾವ್ಯ** ,, ವನ್ನು ಚಂಪೂರೂಪದಲ್ಲಿ ರಚಿಸಿ ಕನ್ನಡ ಸಾಹಿತ್ಯೋದ್ಯಾನವನ್ನು ಮತ್ತಿಷ್ಟು ಸುಂದರಗೊಳಿಸಲು ಪ್ರಯತ್ನಮಾಡಿದ್ದು ಪರಮಸಂತೋಷಕರವಾಗಿದೆ. ಈ ಕಾವ್ಯವನ್ನು ನೋಡಿದರೆ ಹಿಂದಿನ ಮಹಾಕವಿಗಳ ತೂಕಕ್ಕೆ ಸರಿಬರುವ ಕವಿಗಳು ಬದುಕಿಕೊಂಡಿರುವರಲ್ಲಾ ! ಎಂದು ಹರ್ಷೋದ್ಗಾರ ತೆಗೆಯುವಂತಾಗುವದು. ಹುಲುಸಾದ ಕನ್ನಡ ನಾಡಭೂಮಿಯಲ್ಲಿ ಯಾವ ಕಾಲಕ್ಕೂ **ವರಕವಿಗಳ** ಅಭಾವವಾಗುವದಿಲ್ಲವೆಂದೇ ತೋರುತ್ತದೆ. ಆದರೆ ದೊಡ್ಡಕವಿಗಳು ಎಲೆಮರೆಯ ಕಾಯಿಗಳಂತೆ ಯಾರಿಗೂ ತಿಳಿಯದಂತಿರುವರು. ಅವರಿಗೆ ಜನರಿಂದ ಬರುವ ಮಾನಮರ್ಯಾದೆಗಳ ಅಪೇಕ್ಷೆಯಿಲ್ಲದಿರುವದೇ ಮೂಲಕಾರಣವೆಂದು ಹೇಳಬಹುದು. ಗುರುಲಿಂಗಕವಿಗಳನ್ನು ಸಾಮಾನ್ಯಜನರಲ್ಲಿ ಪ್ರಸಿದ್ಧಿಪಡೆದುಕೊಂಡ ಕವಿಗಳಾದರೂ ನೋಡಿರಲಿಕ್ಕಿಲ್ಲ, ಅದೇಕೆ ಅವರ ಹೆಸರನ್ನು ಕೂಡಾ ಕೇಳಿರಲಿಕ್ಕಿಲ್ಲ. ರಾಜಬೀದಿಯಲ್ಲಿ ಅರಳಿ ನಿಂತುಕೊಂಡ ನಿರ್ಗಂಧ ಪುಷ್ಪವನ್ನು ನೋಡಿ ಹಾದಿಕಾರರು ಸಂತೋಷಪಡುತ್ತಿರಬಹುದು. ವನಮಧ್ಯದಲ್ಲಿ ಅರಳಿ ಅಲ್ಲಿಯೇ ಸುಗಂಧ ಪಸರಿಸುತ್ತಿರುವ ಪುಷ್ಪವನ್ನು ನೋಡಿ ಆನಂದ ಪಡುವ ಭಾಗ್ಯವು ಎಷ್ಟು ಜನರಿಗೆ ದೊರೆಯಲು ಸಾಧ್ಯವಾದೀತು !

ಗುರುಲಿಂಗಕವಿಗಳು ಅರಣ್ಯದ ಸುಗಂಧ ಪುಷ್ಪದಂತಿರುವರು. ಇವರು ಹದಿನಾರು ಆಶ್ವಾಸಗಳಲ್ಲಿ ಹನ್ನೊಂದನೂರಾ ಎಂಬತ್ತೊಂದು ಗದ್ಯ ಪದ್ಯಗಳುಳ್ಳ ಮಹಾಕಾವ್ಯವನ್ನು ರಚಿಸಿದ್ದಾರೆ. ಶಾರ್ದೂಲವಿಕ್ರೀಡಿತ ಚಂಪಕಮಾಲಾ, ಮತ್ತೇಭವಿಕ್ರೀಡಿತ, ಕಂದ ಹೀಗೆ ವಿವಿಧಛಂದಸ್ಸುಗಳಲ್ಲಿ ಪದ್ಯಗಳನ್ನು ರಚಿಸಿದ್ದರಿಂದ ಓದುಗರ ಮನಸ್ಸನ್ನು ಆಕರ್ಷಿಸುವಪಾಗಿರುವದು. ಕವಿಗಳು ಬಹುಶ್ರುತರಾಗಿರುವರೆಂಬುವದು ಅವರು ಗ್ರಂಥದಲ್ಲಿ ಅಲ್ಲಲ್ಲಿ ಸಂದರ್ಭಾನುಸಾರವಾಗಿ ಹೇಳುವ ಕಥೆಗಳಿಂದ ತಿಳಿದುಬರುತ್ತದೆ. ಅಲ್ಲಲ್ಲಿ ವರ್ಣನೆಗಳನ್ನು ಒಳ್ಳೇ ಸ್ವಾರಸ್ಯವಾಗಿ ಮಾಡಿರುವರು. ಅಂತು ಗುರುಲಿಂಗಕವಿಗಳು ಕನ್ನಡ ಸಾಹಿತ್ಯಕ್ಕೆ ತಮ್ಮ ಭಕ್ತಿಕಾಣಿಕೆಯನ್ನು ಅರ್ಪಿಸಿ ಕನ್ನಡಿಗರನ್ನು ಚಿರಋಣಿಗಳನ್ನಾಗಿ ಮಾಡಿದ್ದಾರೆ. ಕನ್ನಡಿಗರು ಈ ಕವಿಗಳಿಗೆ ತಕ್ಕ ಪ್ರತಿಫಲವನ್ನು ನೀಡಿ ಅವರ ಋಣದಿಂದ ಮುಕ್ತರಾಗುವದೊಳ್ಳೇದು.

ಈ ಕವಿಗಳು ಇನ್ನೂ ಅನೇಕ ಕಾವ್ಯಗಳನ್ನು ಬರೆಯುವಂತೆ ಶರಣರು ಅವರಿಗೆ ಅನುಗ್ರಹಿಸಲಿ.

ಪಂ|| ನಾಗಭೂಷಣ ಶಾಸ್ತ್ರೀ
ಅಖಿಲ ಭಾರತ ವೀರಶೈವ ವಿದ್ಯಾಪೀಠದ ಕಾರ್ಯಾಧ್ಯಕ್ಷರು
ಮತ್ತು
" ಸಾವಧಾನ ,, ಸಂಪಾದಕರು ಗದಗ.

 

# ವಿಷಯಾನುಕ್ರಮಣಿಕೆ





ಗ್ರಂಥಕರ್ತರು.

। ಶ್ರೀ ಗುರು ಶಿದ್ಧಲಿಂಗ ಪ್ರಸನ್ ।

# ಬಸವ ಜನ್ಮ ಮಹಾ ಕಾವ್ಯವು

.... ಪೀಠಿಕಾ ....



( ಶಾರ್ದೂಲ ವಿಕ್ರೀಡಿತವೃತ್ತ )

ಶ್ರೀ ಮತ್ಪಾವನಪಾದಪಂಕರುಹನಂ । ಸದ್ಭಕ್ತಹೃತ್ಪೀಠನಂ ॥
ಸೋಮಾದಿತ್ಯಹುತಾಶನತ್ರಿಣಯನಂ । ಕಾಮಾಂಗವಿಧ್ವಂಸನಂ ॥
ಸ್ವಾಮೀವಿಘ್ನವಿನಾಶವೀರಪಿತನಂ । ಗಾನಾಹಿಪತ್ಕರ್ಣನಂ ॥
ವಾಮಾವಾಮಶರೀರನಂ । ವಿಭುವಿನಂನಂಬಣ್ಣಿಪೆಂಸಂತತಂ ॥ ( ೧ )

( ಚಂಪಕಮಾಲಾವೃತ್ತ )

ಪೊರೆವುದುದೇವದೇವತಟನೀಧರ ಗೋಧರಕಾಲಕಾಲಮಾ ।
ವರಸುತನಂಗಭಂಗಕರವಾಕ್ಪತಿವಾಕ್ಪತಿವಂದ್ಯವಂದ್ಯರ ॥
ದುರಿತಮಹೀಜವಾತ ಗಜಘಾತಪಂಪಾಪರರಾಜರಾಜಪ್ರೀ ।
ತರಜನಿಯಾಣ್ಮಭಾನುದೃಗುಪಾವಕಪಾವಕರಾಗ್ರಭೂಷಿತ ॥ ( ೨ )
ಹಂಸಹಜ್ಯಾತೆ ಭಕ್ತಜನಪ್ರೀತೆ ವಿನಾಯಕಮಾತೆ ಭೂನುತೇ ।
ಧುರಕತಿಭೀತೆ ಮಾನ್ಯಜನನಾಥೆ ವಿಲಕ್ಷಣಖ್ಯಾತೆ ಗೋಸುತೆ ॥
ಹರಿಶತಕಾಂತೆ ಯಾಮಿನಿನಿತಾಂತೆ ನಿದಾನರದಾಂತೆ ಭಾರತೆ ।
ಅರಿಕುಲಘಾತೆ ರಕ್ಷಿಪುದುಬಾಲಕನಲ್ಪಚರಿತ್ರೆ ಪಾರ್ವತೆ ॥ ( ೩ )
ಹರಸುರಿನೇತ್ರದಿಂಜನಿಸಿ ದಕ್ಷನಯಾಗಕೆಪೋಗಿ ಚಂದ್ರನಂ ।
ಧರೆಯೊಳುಮೆಟ್ಟಿಸೂರ್ಯನಿರವಂ ನೆರೆಭಂಗಿಸಿ ಘೋರಕೋಪದಿಂ ॥
ನರಹರಿಚರ್ಮವುಂ ಸುಲಿದು ಯೋಗಿಗಳಾಸನಕಿತ್ತು ವೈರಿಗುಂ ।
ಕುರಿಮೊಗಮಾಡಿ ಮೋದಿಸಿದವೀರನೆ ರಕ್ಷಿಪುದೆನ್ನ ಸಂತತಂ ॥ ( ೪ )

## —: ವಚನ :—

ಇಂತುಪರಮದೇವನ ಪಾದಾರವಿಂದಮಂ ನೆನೆದು, ಸರ್ವಮಂಗಳೆ ಯೆನಿಪ ದಾಕ್ಷಾಯಣಿಯ ಮಂಗಲವಾದಮಂ ಸುತಿಸಿ ಶ್ರೀಮದ್ವೀರಭದ್ರನ ಚರಣಕುಜಪಲ್ಲವಂಗಳಂ ಹೃದಯದೊಳ್ನೆಲೆಗೊಳಿಸಿಮತ್ತಮಿನ್ನುಂ, ವಿಘ್ನಾರಿ ಪಾದಮಂನುತಿಪೆಂ ॥ ( ೫ )

## ( ಕಂದಪದ್ಯ )

ಶ್ರೀ ಮದುಮಾಪುತ್ರಂಸುಖ !<br>
ಮಾಮರವರಚೈತ್ರ ನಿಖಿಲನಿಗಮಚರಿತ್ರಂ ॥<br>
ಪ್ರೇಮಾಬ್ಧಿ ಪೂರ್ಣಗಾತ್ರಂ ।<br>
ಕಾಮಿತವೆನಗೀಗೆ ವಿಘ್ನ ವಾರಿಧಿಭೈತ್ರಂ ॥ ( ೬ )

ಗಣವರನೆ ವಿಘ್ನನಾಯಕ ।<br>
ಮಣಿಮಯಭೂಷಿತನೆ ನಿನಗೆಬೇಡುವೆ ದಯದಿಂ ॥<br>
ಘನತರದೀ ಸತ್ಕಾವ್ಯವ ।<br>
ದಿನಕರಪ್ರಭೆಯಂತೆ ಮೆರಿಸು ಭುವನದಿಸತತಂ ॥ ( ೭ )

ಗಿರಿಸುತೆಯ ಕುವರಗಜಮುಖ ।<br>
ಪರಿಪರಿಕಂಟಕವ ಪರಿಸುಪೇರೊಡಲನೆನೀಂ ॥<br>
ತರಳಂನಾನಿದಗೈದೆಂ ।<br>
ಪುರಹರಸುತ ವೀರಭದ್ರದೇವನದಯದಿಂ ॥ ( ೮ )

## — ವಚನ —

ಇಂತುನಾಂನಾಗಾನನಸ್ತುತಿಯಂ ನೆಗಳ್ಚಿ ಶಿವಶರಣರಪಾದಾಬ್ಜಮಂ ಹೃದಯದೊಳ್ನೆಲೆಗೊಳಿಸಿ ಪೂರ್ವಸತ್ಕವಿಗಳಿಗಭಿವಂದಿಸಿ ಹರಪ್ರಸಾದದಿಂದೀ ಕೃತಿಯಂ ರಚಿಸಿದೆಂ ತರುಳತನದಿಂ ॥ ( ೯ )

## [ ಮತ್ತೇಭವಿಕ್ರೀಡಿತವೃತ್ತ ]

ಇದುಸದ್ಭಾವದಕಾರಣಂ ವಿಲಸಿತಾನಂದಾಶ್ರಯಂ ಪಾವನಂ ।
ಮದನಾರಾತಿಯಧರ್ಮಗಾತ್ರಸಹನಂದೀಜನ್ಮಸಂಕೀರ್ತನಂ ॥
ಮದಮಾಂದ್ಯರ್ಮನಮಂ ನಯಂಗೊಳಿಪ ಪಂಕೇಜಾಪ್ತಬಿಂಬಂಘನ ।
ತ್ಪದಿತಾಂಮಾನಿಕಮಾಗಲೆಂದುನುತಿಪೆಂ ನಾನೆನ್ನಗುರ್ವೀಶನಂ ( ೧೦ )

ಗುರುವೇ ತನ್ಮಪ್ರಸಾದದಿಂ ರಚಸಗೈದೇಂ ನಂದಿಕಬ್ಬಂ ನಿಜಂ ।
ಗುರುವೇಸುಬ್ರಹ್ಮಣ್ಯತ್ಪತ್ಪದವನುಂ ಸಂಕೀರ್ತನಂ ಮಾಡಿದೆಂ ॥
ಗುರುವೇಲೇಖವಪುಣ್ಯಮಂ ತವುಗೆಮೋದಾಕಾರದಿಂದೀಯುತಂ ।
ಗುರುವೇ ಬೇಡುವೆನೆನ್ನದೀಜನನಮಂ ಮಾಣ್ಚೆಂಬುದಂನಾಂ ಸದಾ ॥( ೧೧ )

## ( ವ ಚ ನ )

ಇಂತು ಗುರುವರ್ಯರೆಂವೆನಿಪಾಚಾರ್ಯವಂಶನರಸಿಂಹಮಹನೀಯ ರೊಡಲಾಬ್ಧಪುನೀತರಾದ ಸುಬ್ರಹ್ಮಣ್ಯಮಹಾತಿಶಯರ ಕರುಣಬಲದಿಂ ವಿದ್ವಜ್ಜನ ಹಸ್ತದೊಳ್ ಕ್ಷಣಮಾತ್ರಮಾದೊಡಂ ವಿಶ್ರಾಂತಿಯಂ ತಳೆಯ, ತಕ್ಕೀ ಪುಟ್ಟಕಬ್ಬವ,ಂ ಲಿಖಿಸಿದೆಂ ತತ್ಕಾರಣಮೀ ಪ್ರಥಮಪುಷ್ಪಮಂ ಗುರು ಪಾದಕರ್ಪಿಸಿ ಮತ್ತ ಯೆನ್ನಯ ಜನನಪಿತರಾದ ಕುರ್ತಕೋಟಿಯ ಶಾಂತ ವೀರದೇವರಡಿದಾವರೆಗಳಂಧ್ಯಾಸಿಪೇ ॥ ( ೧೨ )

## [ ಕಂದಪದ್ಯ ]

ಪಿತವರನೆ ನಿಮ್ಮ ಮಹಿಮದಿ ।
ಕ್ಷಿತಿಯೊಳುನಾಂ ವಿದ್ಯನಿಧಿಗಳಾಶ್ರಯವಾಂತೇ ॥
ಸತತದಿತಮ್ಮಯಚರಣದಿ ।
ಮತಿಯುನು ನಾನಿರಿಸುವಂತೆ ಕೃಪೆಮಾಡುವದು ॥ ( ೧೩ )

ಹಿಂದಿನಜನ್ಮದಪುಣ್ಯದೋ ।
ಳಿಂದಿಗೆತವಜಾತನಾದೆ ಪುರಹರರೂಪಾ ॥
ಹೊಂದಿಸಿ ಮುಂದಿನಭಕ್ತಿಗೆ ।
ಚಂದದಿಕಳಿಸೆನ್ನನೀಗ ಮುಕ್ತಿಯುಮನೆಗೆ ॥ ( ೧೪ )

ಪೊತ್ತಂತೋರುವ ಯಂತ್ರದ ।
ವೃತ್ತಿಯಲಿಂದೆನ್ನಚಿತ್ತದೊಳುವಾಸಿಸಿನೀಂ ॥
ಬಿತ್ತರಗೊಳಿಸಿದೆ ಕಬ್ಬಂ ।
ಮತ್ತಂನಾನೆತ್ತಬಲ್ಲೆ ಪಿತಗುರುವರನೇ ॥ ( ೧೫ )

## [ ವ ಚ ನ ]

ಇಂತು ಪಿತವರ್ಯರ ಪಾದಧ್ಯಾನಮಂಗೈದು ಮುನ್ನಮೀಧರುಣಿಗವ ತರಿಸಿದ ವಿದ್ವಜ್ಜನರಂ ಕೀರ್ತಿಪೇಂ ॥ ( ೧೬ )

## [ ಕಂ ದ ಪ ದ್ಯ ]

ವಿಭುಧರೆ ವಿನಯದಿಬೇಡುವೆ ।
ಶುಭಕರಮಾಗಿರ್ದ ತಮ್ಮ ಪ್ರೆಮೋದಧಿಯ ॥
ನ್ನಭಿವರ್ದಿಸಿ ನೋಡುವವದಿದ ।
ನಭವನ ಭಕ್ತಿಯುನು ಹೃದಯತಾಣದೆನಿಲಿಸಿ ॥ ( ೧೭ )

ಕವಿತಾ ಲೇಖನಶಕ್ತಿಯು ।
ಲವಮಾದರು ತೋರದೆನಗೆ ಮಂಕರತೆರದಿಂ ॥
ತವಕದಿಲಿಖಿಸಿದೆ ಕಬ್ಬಮಿ ।
ದವಮಾನವಮಾಡದಂತೆಯೊಲಿದೋದುವದು ॥ ( ೧೮ )

ಪೆಳವಂಗಿರಿಯಡರುವಮೇ ।
ಣಿಳ್ತಿಯಾಲೋಕಿಸುವಕೃತಿಯಕುರುಡಂತಳಿದೋ ॥
ಲ್ಬಲುಸಾಸಗೈದು ರಚಿಸಿದೆ ।
ಹುಲುಮಾನವನಾನದೆತ್ತಲರಿವೆಂ ಕೃತಿಯಂ ॥ [ ೧೯ ]

ನೆಲುವಿಗೆಪಾರ್ದ ಬಿಡಾಲಂ ।
ಛಲದಿಂದಿವಗಾಣ್ಬೆನೆಂದು ಪಾರುವತೆರದಿಂ ॥
ಕಲಿತನನುಳ್ಳ ಹನೆಂದದಿ ।
ವಿಲಯಾಕ್ಷನ ಕಾವ್ಯಗೈದೆ ನಿಂದಿಸಿನಗರೆ ॥ ( ೨೦ )

ಕೃತಿಗೈದವನೆಂತಿರಲಿ ।
ಕೃತಿಯಾಪರ ದೇವಲೀಲೆಗೂಡಿರಲಿದನೀವ್ ॥
ಹಿತದಿಂ ಲಾಲಿಸುತಂ ಸಲೆ ।
ಸತತದಿ ನೋಡುತ್ತ ಲಿರ್ಪಿ ರೆಂಬೆನು ನಾನು ॥ ೨೧

ತಕ್ಷಃ ಕಂಟಕ ಕೂಡಿಹ ।
ಲಕ್ಷಣ ಕೇತಕಿಯು ನೋಡಿ ಕಂಟಕ ಮೆನುತಾ ॥
ಲಕ್ಷಿಸಿ ನುಡಿಯದೆ ಗಂಧದ ।
ಪಕ್ಷವ ವಹಿಸುತ್ತ ಕೊಳ್ಳದಿರ್ಪರೆನರರು ॥ ೨೨

ಗುರುಪತ್ನಿ ಗಮನದಿಂತಾ ।
ನುರುತರ ಕ್ಷಯಕುಷ್ಟ ರೋಗಿ ಯಾಗಿರೆ ಚಂದ್ರಂ ॥
ವರದಮೃತ ಕಿರಣದಿಂ ಸಲೆ ।
ಭರಿತಮುದಾಗಿರಲು ಮಾನ್ಯವೀಯರೆ ಬುಧರು ॥ ೨೩

ನಾತರಳಜ್ಞಾನಿಯು ನಿಜ ।
ಖ್ಯಾತಿಕನಲ್ಲಾದಡೀಶ ನೆನ್ನಿಂ ನುಡಿಸಿದ ॥
ನೀತಿಯದಿದು ಕಬ್ಬಂ ನೀ ।
ನ್ನೀತಿಗೆ ಮನಗೊಟ್ಟು ಪ್ರೀತಿಯಿಂದೋದುವದು ॥ ೨೪

ವಾರಿಯು ಕ್ಷೀರದಿ ಬೆರೆತಿರೆ ।
ವಾರಿಯುನುಳಿದು ಚ್ಛದುಗ್ಧ ಸೇವನೆಗೈವ ॥
ವಾರಿಜಜವಾಹಪೋಲ್ವರ ।
ವಾರಿಜಪದಯುಗಳಕಾನ ದಾರಡಿಯಪ್ಪೆಂ ॥ ೨೫

ಗುರುಲಘುಪ್ರಾಸಂಯತಿಗಣ ।
ಬರೆಯಲು ತಪ್ಪಿರಲು ತಿದ್ದಿತೋರ್ಪುದುಸುಜನರ್ ॥
ಎರಗುವೆತವಪದ ಪದ್ಮಕೆ ॥
ವರವೀರೇಶ್ವರನ ಕರುಣನಿಮಗಾಗುವದು ॥ ೨೬

[ ಉತ್ಪಲಮಾಲಾವೃತ್ತ ]

ಇತ್ತಿದುಶ್ರೀಂಗಿರಾಜಘನಕಾವ್ಯದಿ ಗದ್ಯದರೂಪದಿಂಬದ ।
ನ್ನಿತ್ತಮಚಂಪು ಕಾವ್ಯದಲಿ ತೋರಿದ ಸತ್ಕವಿ ಯಾರದೆಂಪೆನ ।
ಲ್ಸತ್ಯದಪೀಠದುಜ್ಜಯಿನಿ ವೃಷ್ಟಿಯಸೂತ್ರದ ಸಂದಿ ಗೋತ್ರದೊಂ ।
ಟಿತ್ತಿನ ಶಿದ್ಧಲಿಂಗ ಗುರುಜಾತಸುತಾ ಗುರುಲಿಂಗನಾಮಕಂ ॥ ೨೭

[ ಕಂದಪದ್ಯ ]

ಧರೆಗಧಿಕಕುರ್ತಕೋಟಿಯ ॥
ವರವೀರನತಾತಭಕ್ತ ಸೇವಕನಷ್ಟಾ
ವರಣದ ಮೊದಲಿನವೆರಡರ
ಸರಸಾಕ್ಷರ ನಾಮಕವಿಯ ಪ್ರಥಮದ ಪುಷ್ಪಂ ॥ ೨೮

# [ ಗದ್ಯ ]

ಇದು ಶ್ರೀ ಮದ್ವೀರ ಶೈವಾಚ್ಯಾರಧು ರೀಣಶಾಂತವೀರ ದೇವರೊಡಲಂಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವ ಜನ್ಮ ಮಹಾಕಾವ್ಯದೋಳ್ ಮಂಗಲಾಚರಣಂ ಸಮಾಪ್ತಂ ಅಂತು ಮಗಂ ಲಾಚರಣಂ ಗದ್ಯ ಪದ್ಯಂಗಳಿಪ್ಪತ್ತೆಂಟ್ಕಕಂ ಮಂಗಲಮಹಾ

# 卐 ಪ್ರಥಮಾಶ್ವಾಸ ಪ್ರಾರಂಭ. 卐

[ ಉತ್ಪಲಮಾಲಾವೃತ್ತ ]

ಶ್ರೀ ಪರಮೇಶನೇತ್ರಿ ಪುರನಾಶನೆ ವಾಸುಕಿ ದೇಹಭೂಷನೇ
ಶ್ರೀ ಪತಿಮಿತ್ರನೇ ಧವಲಗಾತ್ರನೆ ಪಾಪಲತಾ ಲವಿತ್ರನೇ
ಗೋಪತಿವಾಹನೇ ಸ್ಮರನಪಾಹನೆ ಶೈಲಜೆಯರ್ಧದೇಹನೇ
ಗೋಪತಿ ದೀಪನೆ ಪೊರೆವ ದಂತಕಲೋಪನೆ ಮೇರು ಚಾಪನೇ ॥೧॥

ಗೋಪನೆ ಗೋಪ ವಂದಿತನೆ ಗೋಪತಿವಾಹನೆ ಗೋಪವಾಸನೆ
ಗೋಪತಿ ನೇತ್ರನೇ ಪರಮಗೋಧರ ಮಿತ್ರನೆ ಗೋಪವಿತ್ರನೇ ॥
ಗೋಪತಿ ಜಾತೆ ನಾಥನೆ ಸುಕೋಪ ಕಣಾಯುತ ಗೋಪ್ರಸಿದ್ಧನೇ ।
ಗೋಪರಿಪಾಲನೇ ಪೊರೆವುದೈ ವರಗೋಶ್ರುತಿಮಾಲಲೋಲನೇ ॥ ೨

[ವಚನ]

ಧರೆಯೊಳ್ಮೀರಿದ ಭಕ್ತಿನಿಕರಂ ದಯದಾಕರಂ ವೈರಿಭೀಕರಂ ಮೋಕ್ಷದಾಗರ ಮೆನಿಪ ಕಲ್ಯಾಣಪಟ್ಟಣದೊಳ್ವಿರಾಜಿಪ ಸಿದ್ಧರಾಮಂ ಚೆನ್ನಬಸವನಂ ಶರಣಸಭೆಯೊಳ್ದೀರ್ಘದಂಡ ಪ್ರಣತನಾಗಿ ಬೆಸಗೊಂಡಂ ॥ ೩

[ಕಂದಪದ್ಯ]

ಎಲೆದೇವ ಕೇಳು ನಂದಿಯು ।
ಮಲಹರ ಸದ್ಧರ್ಮ ರೂಪನೆಂಬರ್ಜಗದಿ ॥
ಕಲುಷಮುದಾಗಿಹಭವದೊ ।
ಳ್ತಾಳಿದೋರಿದನೆಂತುತಾನುಕಲ್ಯಾಣದಲಿ ॥ ೪

ಆರಿತ್ತರ್ ಪೇಳಾತಗೆ ।
ಮಾರಾರಿಯು ತೊರೆದು ಪೋಪಕರ್ಕಶದುರುಲಂ ॥
ಸಾರಾಸಾರವ ತಿಳುಹಿಸು ।
ಗಾರಾಗಿಹುದೆನ್ನ ಮನವು ಸಂದೇಹದಲಿ ॥ ೫

ವಿನಯದಿ ಕೇಳಿದ ರಾಮಂ ।
ಘನಬಸವನ ಜನ್ಮಕಾದ ಕಾರಣಮೆಲ್ಲಂ ।
ಘನತೋಷದಿ ಜನರೊಲಿವಂ ।
ತನುಮತದಿಂ ಪೇಳ್ದ ಚೆನ್ನಬಸವೇಶ್ವರನು ॥ ೬
ಎಲೆರಾಮ ಕೇಳು ನಂದಿಯು ।
ನೆಲದೊಳ್ಜನಿಸಲ್ಕದೊಂದು ಕಾರಣಮುಂಟು ॥
ಮಲಹರ ಕೈಲಾಸದಿತಾ ।
ವಿಲಸತ್ಸಭೆಯೊಳ್ ಮುಹೂರ್ತಗೊಂಡಿರುತಿರ್ದಂ ॥ ೭

## [ವಚನ]

ಇಂತಾಮೇರುಗಿರಿವಾಸಂ ಸುರನರೋರುಗರೀಶಂ । ಕೀರ್ತಿಪ್ರಕಾಶಂ ಸಭೆಯೊಳಿರ್ಪ ಕಾಲದೊಳ್ವಿಮಲ ಭೃಂಗಿ ಮಾಕಾಳ ಮೊದಲಾದ ಗಣದಿಂ ವಿರಾಜಿಪಂ ॥ ೮

## (ಕಂದಪದ್ಯ)

ಗಿರಿತನುಜೆಯಾಂತದೇಹದಿ ।
ಪರಿಪರಿಸೌಂದರ್ಯಕಾಂತಿ ಯಾಂತಿಹದೇವಂ ॥
ಹರುಷದಲಿ ತನ್ನ ತನುಜರ ।
ಸರಸಾಲಾಪದಲಿಕೂಡಿಕೊಂಡಿರುತಿರ್ದಂ ॥ ೯ ॥
ಕನಕಾಚಲಶಿಖರದೆನಿ ।
ರ್ಜನಲಿಂಗಂ ಜನಿತ ಮೋಹಕರಶಿವಲಿಂಗಂ ॥
ಘನತರ ಪುಣ್ಯ ಸುರೂಪಂ ।
ಚಿನುಮಯದೇವೇಶ ನಿರ್ಪುದೇಂ ಚೆನ್ನಿಗಮೊ ॥ ೧೦
ಎಡಬಲ ಹರಿವಿಧಿ ಸತಿಯರು ।
ಸಡಗರದಿಂ ಚಮರಮಂ ಸುಧಾಳಿಸುತಿರೆತಾಂ ॥
ಮೃಡನಡಿಗೆರಗುತಬಾಳ್ವರ ।
ಧೃಡದಿಂದುರೆ ಪರಸುವಂತೆ ನೆರೆಯೊಪ್ಪಿದುದು ॥ ೧೧

ಗಿರಿಶನ ಸಭೆಯೊಳ್ಕಿರೆದರು
ಪರಿಪರಿ ಪದವಿಯನು ಪಡೆದಶಿವಗಣ ಮತ್ತುಂ ||
ಹರಿಸುರಪಾಲರು ಮುಖ್ಯ |
ರ್ಚರಣಾ ಶ್ರಯಪೊಂದಿ ನಿತ್ಯಸುಖದಿಂ ನಯದಿಂ || ೧೨

## [ಚಂಪಕಮಾಲಾವೃತ್ತ]

ಸುರಪತಿ ಪಾದಮೊತ್ತುವನು. ಕಾಲನು ಬೀಸುವ ನಾಲವಟ್ಟದಿಂ
ವರುಣನು ವಾರಿಯಿಂ ಸಭೆಯ ಸಾರಣೆಮಾಳ್ಪನು ಧೀರನೈರುತಿ ||
ದೇವಸಮ್ಮುಖದೆ ದೂರನುಪೇಳ್ವನು ಭಕ್ತ ರಿಷ್ಟೆಯಂ |
ಪುರಹರ ಮಿತ್ರ ನೆತ್ತಿಹನು ಸತ್ತಿಗೆ ದೇವನ ಮಸ್ತಕಾಗ್ರಕೆ || ೨೩

ಶಿವಗಣಮೆಲ್ಲ ತಾವು ಶಿವನಾಮವ ಧ್ಯಾನಿಸಿದ್ವಾದಶಾರ್ಕರುಂ |
ತವಕದಿ ತಮ್ಮತೇಜವನು ಹಬ್ಬಿಸಿ ಪಾವಕಸಪ್ತಜಿಹ್ವರು ||
ಜವದೊಳುಸೇವೆಗೈದು ಘನಕಾಳನು ಪಾಠಕನಾಗಿ ಶೈಲಜಾ ||
ಧವನೊಳುಮೋದಗೊಳ್ಳುತಿರುತಿರ್ದರದೇಂ ಶಿವಸಂಗ ಭಾಗ್ಯಮೊ || ೧೪

## (ಕಂದಪದ್ಯ)

ಕಾಮನನು ಸುಟ್ಟಮಹಿಮನ |
ಕಾಮುಕತನವೆನಿತು ಪೇಳ್ವೆಕೇಳಲೆರಾಮ ||
ಕಾಮಿನಿಮಣಿಯುರ ನುಭಯರ |
ಕಾಮಿಯತೆರದಂತೆ ತನ್ನ ಶಿರದುರದಿಟ್ಟಂ ||೧೫||

ಸತಿಸಿಂಹ ಹಸ್ತಜಿಂಕೆಯು |
ಸುತನಿಲಿ ಧ್ವಜಸರ್ಪ ಹರಯುಗರುಡಂ ಮುಕುಟಾ |
ಶ್ರಿತಶಶಿನಿಧಿಹಂಸಂ ಶಿರ |
ಹುತವಹವಾಗಳಕೂಡಿ ಯೋಗಿವೊಲಿರ್ಪಂ || ೧೬

## [ವಚನ]

ಇಂತುಮಹಾದೇವಂತ್ರಿಶೂಲಧರಂ ತ್ರಿಲೋಕಸೂರಂ। ತ್ರಿರೇಖಧಾರ್ಯಂ ತ್ರಿನೇತ್ರತಾಳ್ದಂ। ತ್ರಿಗುಣಗಳನಾಳ್ದಂ। ತ್ರಿಗಂಗೆಯಂತೀಳ್ದಂ। ತ್ರಿಪುರಗಳ ನುರುಳ್ಚಿದಂ ತಾನಾಗಿರ್ಪನೆಂದು ತದ್ದೇವನಂ ಸಭಿಯೆಲ್ಲಂಕೀರ್ತಿಸುತಿರ ಲ್ಮುರುಕಾಲಿನಭೃಂಗಿನಾಂಟ್ಯವನಾಡಲ್ಸುರಗಣರು ಘೇರವವಗೈಯಲ್ ಯಕ್ಷ ಕಿನ್ನರ ಕಿಂಪುರುಷರೆಲ್ಲರ್ನೇವಾ ತತ್ಪರರಾಗಿರಲ್ಪಸುಗಳ್ದಿವ್ಯಾಗಮಗಳಭವನಂ ಕೊಂಡಾಡುತಿರಲಿದನೀಕ್ಷಿಸಿಶೇಷಂ। ದ್ವಿಸಹಸ್ರಜಿಹ್ವೆಯಿಂ ದೇವನಂ ಪೂಗಳ್ ತನ್ನೊಳಿಂತೆಂದಂ ॥ ೧೭

## [ಮತ್ತೇಭವಿಕ್ರೀಡಿತವೃತ್ತ]

ಶಿರದೊಳ್ಪೊತ್ತಿನು ಭೂಮಿಭಾರ ಹರಿಯೊಳ್ನಾಸೇವೆಯುಂಮಾಡಿದೆಂ।
ಭರದಿಂದಿತ್ತಿನುರತ್ನಸಂಚಯುವನಾಂಮೂಕಂಠನೂಲಾಗ್ರಕೇ।
ಧರೆಯೊಳ್ಮಾನ್ಯತಿ ಪೊಂದದೀಗಹರನಂ ಸೇರಲ್ಕಜೇಂದ್ರಾದ್ಯರು
ಶಿರಮಂಬಾಗುವರಿಂಥಪುಣ್ಯವರರೇ ಶ್ರೀಶಂಭುಸಂಯೋಗವು ॥ ೧೮

## (ಕಂದಪದ್ಯ)

ಎನ್ನಯ ಪೂರ್ವದಪುಣ್ಯಂ।
ಸನ್ನುತದಿಂ ಕೂಡಿಹರನಸನ್ನಿಧಮಾಯ್ತೋ ॥
ಚಿನ್ನದಸಂಗದೆಸ್ಫಟಿಕವ !
ದುನ್ನತಿಯಾಂತಂತಿರೆಂದು ಭಾಗ್ಯವನೆನೆದಂ ॥ ೧೯

## —: ವಚನ :—

ಇಂತುಮಹಾಶೇಷಂ ಮನದಿತಾಂ ಮೋದಗೊಂಡುಪಿನಾಕಿಕರದಿಂ ದಿಳಿಯಬೀಳ್ದು ನಡುಸಭೆಯೊಳ್ನಿಂದಿಂದು ಧರನಂಕೀರ್ತಿಸುತ್ತಿರ್ದಂ ॥ ೨೦

[ಚಂಪಕಮಾಲಾವೃತ್ತ]

ವಿಷಜಜಪಾತ್ರಿಯುಂ ಪಿಡಿಪೆಸೇವಿಷಸಂಭವನಂಶತ್ರಾಳಿಪ್ಪೆ ।
ವಿಷಶಯನಾಕ್ಷಿಯುಂಧರಿಸಿಪುರ್ವಿಷಯುಂಗಳನಾಶಮಾಡಿಪ್ಪೆ ।
ವಿಷಶಿರಕಂಠಮೊಳ್ದಳಿದು ಮೇಣ್ವಿಷದಂತರಗಾನಕೇಳಿಪ್ಪೆ ।
ವಿಷಮಸುನೇತ್ರನೆಂದುಭಜಿಪಂ ವಿಷಗರ್ಭನು ಪೂಜ್ಯಭಾವದಿಂ ।
ಹರಿಮುಖತಾತಶೂಲಿಹರಿಕಂಧರಕಾಲಹರಾಹಿಭೂಷಿತ ॥
ಹರಿಹರಿನೇತ್ರಪಾದಹರಿಚಕ್ಷ್ಮ ಮಹಾಹರಿನಾದಲೋಲನೇ ।
ಹರಿವಿಧಿಸ್ತೋತ್ರಕ್ರೋಧ ಹರಿದಂಧಸುಲಾಹರ್ಷಿ ಮೋದಶೀಲನೇ ॥
ಹರಿಸುಪ್ರಪೆನ್ನಪಾಪಹರಿಯೆಂದನು ತಾಹರಿರಾಜಭಕ್ತಿಯಿಂ ॥ ೨೨

( **ಕಂದಪದ್ಯ** )

ಇಂತೆಂದುಸುತಿಪಶೇಷನ ।
ಸಂತಸದಿಂ ನೋಡಿತನ್ನಕರುಣದಲೀಶಂ ॥
ಚಿಂತೆಯ ಬಿಡಿಸುತವೇಹದೆ ।
ತಾಂತಳೆದಂ ಮುನ್ನಿನಂದದೇಂ ಭಾಗ್ಯಮದು ॥ ೨೩

ಜಯವೆಂದುದು ಸುರಗಡಣಂ ।
ಜಯವೆಂದರು ಸಿದ್ಧಸಾಧ್ಯವಿದ್ಯಾಧರರುಂ ॥
ಜಯವೆಂದುದಸುರಪಡೆಯುಂ ।
ಜಯಜಯವೆನ್ನುತ್ತಲಹಿಯಧರಿಸಿದನೀಶಂ ॥ ೨೪

ಎನಿತಾಂಬಣ್ಣಿಪೆದೇವನ ।
ಘನಕಾರ್ಯವಕೇಳುರಾಮ ಆ ದಿನಸಭೆತಾಂ।
ದಿನಮಣಿತೇಜವಪೊಂದುತ ।
ವಿನಯದಿಕಂಗೊಳಿಸಿತೆಂದು ಪೇಳ್ದಂಚೆನ್ನಂ ॥ ೨೫

## [ವಚನ]

ಇಂತುಮಹಾದೇವಂತ್ರಿಶೂಲಧರಂ ತ್ರಿಲೋಕಶೂರಂ। ತ್ರಿರೇಖಧಾರಂ ತ್ರಿನೇತ್ರತಾಳ್ದಂ । ತ್ರಿಗುಣಗಳನಾಳ್ದಂ । ತ್ರಿಗಂಗೆಯಂಶೀಳ್ದಂ । ತ್ರಿಪುರಗಳ ನುರುಳ್ಚಿದಂ ತಾನಾಗಿರ್ಪನೆಂದು ತದ್ದೇವನಂ ಸಭೆಯೆಲ್ಲಂಕೀರ್ತಿಸುತಿರ ಲ್ಮೂರುಕಾಲಿನಭೃಂಗಿನಾಂಟ್ಯವನಾಡಲ್ಸುರಗಣರು ಘೇರವವಗೈಯಲ್ಯಕ್ಷ ಕಿನ್ನರ ಕಿಂಪುರುಷರೆಲ್ಲರ್ಸೇವಾ ತತ್ಪರರಾಗಿರಲ್ವಸುಗಳ್ದಿವ್ಯಾಗಮುಗಳಭವನಂ ಕೊಂಡಾಡುತಿರಲಿದನೀಕ್ಷಿಸಿಶೇಷಂ। ದ್ವಿಸಹಸ್ರಜಿಹ್ವೆಯಿಂ ದೇವನಂ ಪೊಗಳ್ತನ್ನೊಳಿಂತೆಂದಂ ॥ ೧೭

## [ಮತ್ತೇಭವಿಕ್ರೀಡಿತವೃತ್ತ]

ಶಿರದೊಳ್ಪೊತ್ತಿನು ಭೂಮಿಭಾರ ಹರಿಯೊಳ್ನಾಸೇವೆಯಂಮಾಡಿದೆಂ ।
ಭರದಿಂದಿತ್ತಿನುರತ್ನಸಂಚಯವನಾಂಮಕಂಠಮೂಲಾಗ್ರಕೇ ।
ಧರೆಯೊಳ್ಖ್ಯಾತಿ ಪೊಂದದೀಗಹರನಂ ಸೇರಲ್ಕಜೇಂದ್ರಾದ್ಯರು
ಶಿರಮಂಬಾಗುವರೆಂಥಪುಣ್ಯವರರೇ ಶ್ರೀಶಂಭುಃಸಂಯೋಗವು ॥ ೧೮

## (ಕಂದಪದ್ಯ)

ಎನ್ನಯ ಪೂರ್ವದಪುಣ್ಯಂ ।
ಸನ್ನುತದಿಂ ಕೂಡಿಹರನಸನ್ನಿಧಮಾಯ್ತೀ ॥
ಚಿನ್ನದಸಂಗದೆಸ್ಫಟಿಕವ !
ದುನ್ನತಿಯಾಂತಂತಿರೆಂದು ಭಾಗ್ಯವನೆನೆದಂ ॥ ೧೯

## —: ವಚನ :—

ಇಂತುಮಹಾಶೇಷಂ ಮನದಿತಾಂ ಮೋದಗೊಂಡುಪಿನಾಕಿಕರದಿಂ ದಿಳಿಯಬೀಳ್ದು ನಡುಸಭೆಯೊಳ್ನಿಂದಿಂದು ಧರನಂಕೀರ್ತಿಸುತ್ತಿರ್ದಂ ॥ ೨೦

[ಚಂಪಕಮಾಲಾವೃತ್ತ]

ವಿಷಜಜಪಾತ್ರೆಯಂ ಪಿಡಿದೆನೀವಿಷಸಂಭವನಂಶತಾಳಿದೈ ।
ವಿಷಶಯನಾಕ್ಷಿಯಂಧರಿಸಿಪುರ್ವಿಷಯಂಗಳನಾಶಮಾಡಿದೈ ।
ವಿಷಶಿರಕಂಠದೊಳ್ತಳೆದು ಮೇಣ್ವಿಷದಂತರಗಾನಕೇಳಿದೈ ।
ವಿಷಪುಸುನೇತ್ರನೆಂದುಭಜಿಪಂ ವಿಷಗರ್ಭನು ಪೂಜ್ಯಭಾವದಿಂ ।
ಹರಿಮುಖತಾತಶೂಲಿಹರಿಕಂಥರಕಾಲಹರಾಹಿಭೂಷಿತ ॥
ಹರಿಹರಿನೇತ್ರಪಾದಹರಿಚಕ್ಷು ಮಹಾಹರಿನಾದಲೋಲನೇ ।
ಹರಿವಿಧಿಗೂರ್ರಕ್ರೋಧ ಹರಿದಂಧಸುಲಾಹರ್ಷ ಮೋದಶೀಲನೇ ॥
ಹರಿಸುವುದೆನ್ನಪಾಪಹರಿಯೆಂದನು ತಾಹರಿರಾಜಭಕ್ತಿಯಿಂ ॥ ೨೨

( ಕಂದಪದ್ಯ )

ಇಂತೆಂದುನುತಿಪಶೇಷನ ।
ಸಂತಸದಿಂ ನೋಡಿತನ್ನಕರುಣದಲೀಶಂ ॥
ಚಿಂತೆಯ ಬಿಡಿಸುತದೇಹದೆ ।
ತಾಂತಳೆದಂ ಪುನ್ನಿನಂದದೇಂ ಭಾಗ್ಯಮದು ॥ ೨೩

ಜಯವೆಂದುದು ಸುರಗಡಣಂ ।
ಜಯವೆಂದರು ಸಿದ್ಧಸಾಧ್ಯವಿದ್ಯಾಧರರುಂ ॥
ಜಯವೆಂದುದಸುರಪಡೆಯುಂ ।
ಜಯಜಯವೆನ್ನುತ್ತಲಹಿಯಧರಿಸಿದನೀಶಂ ೨೪

ಎನಿತಾಂಬಣ್ಣಿಪೆದೇವನ ।
ಘನಕಾರ್ಯವಕೇಳುರಾಮ ಆ ದಿನಸಭೆತ್ತಾಂ ।
ದಿನಮಣಿತೇಜವಪೊಂದುತ ।
ವಿನಯದಿಕಂಗೊಳಿಸಿತೆಂದು ಪೇಳ್ದಂಚೆನ್ನಂ ॥ ೨೫

## [ವಚನ]

ಇಂತೆಂದುಸಕಲಸಂಭ್ರಮದಿಂ ಫಣಿಪಂಫಣಿ ಭೂಷಣನಂ ಕೊಂಡಾಡಿಯಾ ಗುಣಮಣಿಯ ಬೆರಳಿಗುಂಗುರ ವಾಗಲ್ಸುರಪುರದಂ ಗನೆಯರೆಲ್ಲ ರ್ತೊಳಪ ಮಣಿದೀಪಂಗಳಂ ಬೆಳಗಿ ತಳಿಗೆಯೊಳ್ಸುತ್ತಿ ನಾರತಿಯನ್ನೆತ್ತುತ್ತಿರೆಸಕಲಭುವನದಗರ್ಭಧರ್ಮಾಕಾರನಂದೀಶನಾಸಭೆಗೆಬರುತಿರ್ದಂ || ೨೬

## [ಚಂಪಕಮಾಲಾವೃತ್ತ]

ಬಸವನ ಪಾದವೋಲಸಿತವೇದವೊ, ಶೇಷನ ಪದ್ಮಪುಷ್ಪವೊ ।
ವಿಸುಪಿಣಿವಾಲವೋ ಕುಸುಮಶಸ್ತ್ರನ ಚಾಪವೊ ಭ್ರೂಲತಾಂಶವೊ
ಕಿಸಲಯನೇತ್ರವೋ ಭಸಿತಗಾತ್ರನ ಭಕ್ತಿಯ ಪ್ರೀತಿಜ್ಯೋತಿಯೋ
ತಿಸುಳಿಯ ಪ್ರೇಮದಿಂದೊರೆದಕೀರ್ತಿಯೊಶೃಂಗವೊ ತಾನುಬಣ್ಣಿಸೇಂ । ೨೭

## [ಮತ್ತೇಭವಿಕ್ರೀಡಿತವೃತ್ತ]

ಕಲಧೌತಾದ್ರಿಯುನಿಶ್ಚಲಂ ನೆಲಸಿತ್ತೆ ಫಾಲಾಕ್ಷಭೂಷಂಶಿರಂ ||
ನೆಲಕೀಡಾಡಿದನಿಂದ್ರನಾನೆ ಭ್ರಮೆಯಿಂದೋಡುತ್ತ ಘೀಳಿಟ್ಟಿತು ||
ಛಲದಂಕಾಯುಧ ರಂಧ್ರಮಾಯ್ತು ಭಯದಿಂ ಗಂಗಾಂಬೆಮೈಕುಗ್ಗಿಸಿ ।
ಬಿಲಮಂಪೊಕ್ಕಳು ಕ್ಷೀರಭಂಗಮಾಯ್ತಾ ನಂದೀಶ ಶುಭ್ರತ್ವದಿಂ || ೨೮
ಶಿವಸೌಧಾಗ್ರದೊಳಿಂದ್ರ ನೀಲಮಣಿಯೊ ಕ್ಷೀರಾಬ್ಧಿಯಾಂತಿರ್ದ ಶ್ರೀಧವನೋ ಶ್ವೇತಕರಾಂಡದಿರ್ಪಳಿಯೋತಾಂ ಶುಭ್ರಾಂಶು ಸಂಯೋಗದಿಂ,
ಜವದೊಳ್ವಾಹನ ರೂಪಮಾಂತಿರಳಿಯೋ ತದ್ಬಿಂಬಮಾಧುರ್ಯಮಂ ||
ಸವಿಯಲ್ಬಂದಿಹರಾಹುವೋ ಪೊಗಳಲೇಂ ನಂದೀಶನಾಘ್ರಾಣಮಂ || ೨೯

## [ ಕಂದಪದ್ಯ ]

ಇಂತೆಂಬವೃಷಭದೇವನ ।
ಸಂತೋಷದ ರೂಪವಾನು ಬಣ್ಣಿಸಲಳವೇ ||

ಕಂತುವಿನ ವೈರಿಯಂಗವ ।
ಚಿಂತಿಸುತಂಬಂದ ಪರುಷ ಚಿಂತಕದಂತೆ ॥ ೩೦
ಎಲೆ ಸಿದ್ಧರಾಮ ಕೇಳೈ ।
ಮಲಹರ ಬಸವೇಶ ಸಭೆಗೆ ಬರುತಿರ್ಪಾಗಳ್ ॥
ವಿಲಸತ್ಸಭೆತಾಂಮೋದವ ।
ಫಲಿಸುತ್ತಾನಂದಿಯಂ ಸುವಿನಯದೆ ಕಂಡರ್ ॥ ೩೧

[ಚಂಪಕಮಾಲಾವೃತ್ತ]

ಚತುರಪದಂಗಳಿಂ ವರಣರಂಜಿತದಿಂ ಶುಭಕರ್ಣಭೂಷದಿಂ ॥
ಸತತದುಮಾಮಹೇಶ್ವರರ ಲೀಲೆಯನಿಸ್ವನದಿಂ ಸರಾಗದಿಂ ॥
ಯತಿತಲದರ್ಶದೊಳ್ಪತಿತದಿಂ ರುಚಿಲಕ್ಷಣ ದೃಷ್ಟಿಯಿಂ ಸಮಾ ॥
ಗತಜಸಮಾಗಿ ಶೋಭಿಸಿದನಾ ವೃಷಭಂ ಶಿವಕಾವ್ಯದಂದದಿಂ ॥ ೩೨

[ ಕಂದಪದ್ಯ ]

ನಂದೀಶನಾಗಮವತಾ ।
ವಂದಿನಸಭಿಕರ್ಕಳೆಲ್ಲ ಮೋದದಿನೋಡಿ ।
ಮುಂದರಿವವಾಕ್ಯದಿಂಜಯ ।
ನಂದಿಧ್ವಜ ಪಾರ್ವತೀಶ ಹರಹರವೆಂದರ್ ॥ ೩೩

## — ವಚನ

ಇಂತುಬಂದಾನಂದೀಶಂ ಕಂದುಗೊರಲನ ಸಮ್ಮುಖದಿನಿಂದು ಮುಂದರಿವ ಸಂಭ್ರಮದೊಳ್ಕಂದ ಹಾಸದಿಂ ಕಂದರ್ಪಾರಿಗೊಂದಿ ಸಾಷ್ಟಾಂಗ ಮಂನೆಗಳ್ಚಿತಾನಂದದಿಂ ಪಾದದ್ವಂದ್ವದಡಿಯೊಳ್ನಮ್ರಹೊರ್ತಮಂ ಮಾಡಿದಂ ॥ ೩೪

[ ಕಂದಪದ್ಯ ]

ದಳ್ಳುರಿನೇತ್ರನಪದತಳ ।
ದುಳ್ಳಿಮಹಾವೃಷಭದೇವನನ್ನೀಕ್ಷಿಪೊಡೆ ॥
ಬಲ್ಲಿದಹರಿವಿಧಿಸುರರಿಗೆ ।
ಬೆಳ್ಳಿಯ ಮರಿಯದ್ರಿಯಂತೆ ನೆರೆರಾಜಿಸಿದಂ ॥ ೩೫

[ ಉತ್ಪಲಮಾಲಾವೃತ್ತ ]

ಈಶನಕಾಯಕಾಂತಿ ಶಿರಗಂಗೆಯಜ್ಯೋತಿ ತ್ರಿಪುಂಡ್ರಧಾರಣೊ ।
ದ್ಭಾಸಿತಭಸ್ಮಕೀರ್ತಿಕರಶೂಲದಧೀತಿ ಶರೀರ ಸುತ್ತ ಹ ॥
ವಾಸುಕಿದಿವ್ಯರತ್ನ ಶಿರದದ್ಯುತಿ ಚಂದ್ರದಿನೇಶಪಾವಕಂ ॥
ವಾಸಿಪನೇತ್ರತೇಜ ಪದನಂದಿಪ್ರಕಾಶವ ನಾರುನೊಳ್ಪರು ॥ ೩೬

[ಶಾರ್ದೂಲವಿಕ್ರೀಡಿತವೃತ್ತ]

ನಂದೀಶಂ ಭವನಾಶ ಪಾದದಡಿಯೊಳ್ತಾಂ ಬಂದುಸದ್ಭಾವದಿಂ ।
ಮುಂದಾಗಿಟ್ಟನು ದಕ್ಷಿಣಾಂಘ್ರಿ ಮುರಿದಂ ಮುಪ್ಪಾದವಂ ಸಪ್ಪದಿಂ ॥
ಕುಂದಿರ್ದಂತೆ ಡಭಾಗ ವಿಕ್ಕುತಡಿಯೊಳ್ವಾಲಾಗ್ರಮಂ ಬೀಸಲಾ ।
ವೃಂದಾವಲ್ಲಭ ಕಂಡು ಚಿತ್ರಮೆನುತಂತಾಕೇಳ್ದ ಕಾಮಾರಿಯಂ ॥ ೩೭

[ಚಂಪಕಮಾಲಾವೃತ್ತ]

ಎಲೆಗಿರಿಜೇಶ ನಂದಿಶಯನಾಂತರವೇನಿದು ದಕ್ಷಿಣಾಂಘ್ರಿಯಂ ॥
ಛಲದೊಳುಮುಂದೆ ದೋರುತೆಡಭಾಗವನೂರುತಮೂರುಪಾದಮಂ ॥
ಸಲೆಮುರಿಯುತ್ತಲಾಂಗುಲವಬೀಸುತನೋರೆಯ ಪೋಲೆ ಮಾಡಿತಾ ॥
ಮೆಲುತಿಹನೆಂಬ ರಂಜಿತದೆಕಾಣುವನೇ ನಿದರಂಗಪೇಳುನೀಂ ॥ ೩೮

[ವಚನ]

ಎಂದಾಕಂದರ್ಪಪಿತಂ ಸಂದೆಗಮನುಚ್ಚರಿಸಲಾ ನಂದಿಧ್ವಜಂ ನಂದಿಶಯ ವದಪರಿಯನರಿಯೆಂದಂ ॥ ೩೯

[ಕಂದಪದ್ಯ]

ಕುಸುಮಾಸ್ತ್ರನಸಿತಕೇಳ್ಳೆ ||
ಬಸವೇಶನಮಹಿಮೆತಾನುಬಣ್ಣಿಸಲಳವೇ ||
ವಸುಧೆಗೆ ಗಹನಂ ವೃಷಭಂ |
ಪಶುಪತಿ ಸದ್ಧರ್ಮರೂಪನೆಂಪಂ ಗಿರಿಶಂ || ೪೦
ಗುರುದೇವಂ ನಂದೀಶಂ |
ಪರಿಭವಮೊಳ್ಪಳಲುತಿರ್ಪತ್ರೈಜಗಕೆಲ್ಲಂ |
ವರಸಮ್ಬೋಧೆಯಬೀರುವ |
ಪರಿಯಂತನ್ನಂಗಚಲನವಲನದಿತೋರ್ಪಂ || ೪೧

[ಮತ್ತೇಭವಿಕ್ರೀಡಿತವೃತ್ತ]

ಹರಿಕೇಳ್ಳೆ ಬಲಪಾದದಿಂಬಸವತಾಂ| ಸದ್ಧರ್ಮದಾಚಾರಮಂ ||
ಧರೆಯೊಳ್ಮೂರುಮಲಂಗಳಂ ಸದೆವುದಂ ಮುಪ್ಪಾದದಿಂ ವಾಮದಿಂ ||
ತ್ವರದಿಂ ಮಾಯೆಯುಮಿರ್ಪುದಂ ಪೆಳುದರಿಂ ಸದ್ವಾಕ್ಯದುಚ್ಚಾರಮಂ ||
ಕುರುಹಂಮೋರಿಪರಂ ದಕಿಲ್ಲಭವವೆಂದಾವಾಲಮಂ ಬೀಸುವಂ || ೪೨

( ವಚನ )

ಅಂದುಮತ್ತಂ ಗಿರಿತನುಜೆಯರ್ಧಾಂಗಂ ಮುರವೈರಿಯೊಳ್ನಂದಿನಾಮಪ್ರತಾಪದೇಳ್ಗೆಯಂ ನಿರೂಪಿಸಿದಂ || ೪೩

( ಚಂಪಕಮಾಲಾವೃತ್ತ )

ಘನತರಪಾಪವೃಕ್ಷದಹನಂ ಭವದರ್ಣವಶೋಷಣಂ ಸದಾ ||
ದಿನಮಣಿಪುತ್ರದಂಡಹರದುರ್ವಿಷಯೋಗ್ರರುಜಾಹತಂ ಮಹಾ ||
ಮನಸಿಜವೈರಿದರ್ಶಕರ ಮುಕ್ತವಧೂಸುಖವೀವಸಾಧನಂ ||
ವನರುಹನೇತ್ರನೀನರಿವುದೀಪರಿರಂಜಿಪನಂದಿನಾಮಮಂ || ೪೪

[ವಚನ]

ಇಂತಾಪುರವೈರಿಮುರವೈರಿಗುಸುರಲ್ಪರಮಭಕ್ತಿಯಿಂ ।
ವೃಷಭನಾಮಪಾನದಿಂ ಮೂರಪಿತಂ ಸಂತುಷ್ಟನಾಗಲ್ ಗೃಹನಿವಹವೆಲ್ಲವುಂ
ಜಯಜಯನಿನಾದದೊಳ್ನಂದಿಯಂ ಕೀರ್ತಿಸಲುರೆಭಕ್ತಿಯಿಂ ವೃಷಭನಾಂ
ಶಿವಸಭಿಕರ್ಕಳಿಗೆವಂದನೆಯಂ ನೆ ಗ ಳ್ಚಿ ಚಂದ್ರಾರ್ಧಧಾರಣನ ಪ್ರದಕ್ಷಣ
ಮಂಗೈದು ಮುನ್ನಿನಂದದಿಂ ಶಯನಂಗಯ್ಕೆಲಾಗ ಪ್ರಷ್ಠಭಾಗದೊಳಿರ್ಪಸು
ರರಾಜಂ ಕನಲ್ದುಮನದೊಳಿಂತೆಂದು ಚಿಂತಿಸಿದಂ ॥ ೪೫

[ ಕಂ ದ ಪ ದ್ಯ ]

ತಿಂಗಳನೇತ್ರಂ ಪೇಳಿದ ।
ನಂಗದಿನಂದೀಶ ಕುರುಹುದೋರುವನೆಂದು
ಹಿಂಗಡಿಗೆನ್ನಂಮಾಡಿಹ ।
ನಿಂಗಿತವೇನಿಹುದು ದೇವಸಭೆಯೊಳಗೆಂದಂ ॥ ೪೬

[ಮತ್ತೇಭವಿಕ್ರೀಡಿತವೃತ್ತ]

ಅರರೇನಂದಿಯುಗರ್ವದೆನ್ನ ಮುಖದೊಳ್ತಾನಿಟ್ಟುತದ್ವಾಲದಿ ।
ಪರಿಹಾಶ್ಯಂ ನೆರೆದೋರ್ದನಲ್ಲವೆ ಮಹಾದೇವಂ ಮನಾನಂದಮಂ ॥
ಭರದೊಳ್ತಾಳ್ದನೆ ನಾಕದಲ್ಲಿ ತನಗಿಂತುಲ್ಲಾಸಮಂ ಸೌಖ್ಯಮಂ ॥
ನರದೇವಾಸುರರಲ್ಲಿ ಪೊಂದಿದವರಿಲ್ಲೆಂದಂ ಸುರೋದ್ದಾಮಕಂ ॥ ೪೭

ಇರಲಿಕ್ಕಾಶ್ರಮವಿಲ್ಲ ದೀಶನಿರುವಂತಾ ಪ್ರೇತಭೂಭಾಗದೊಳ್ ॥
ಹರಿದೈತ್ಯೇಶಬಲಿಗೃಹಾಂಗಣದೆನೇವಾವೃತ್ತಿಯಿಂದಿರ್ಪನುಂ ।
ತ್ವರದಿಂಬ್ರಹ್ಮಕಪಾಲ ವೀಶಕರದೊಳ್ಭಿಕ್ಷಾಟಣಂಗೈವುದು ॥
ಮರೆದಾಂ ಮಾಡೆನುಹೀನಕಾರ್ಯಬಸವಂ ಹಿಂಭಾಗದೊಳ್ಮಾಡಿದಂ ॥ ೪೮

(ಕಂದಪದ್ಯ)

ಹರಿಹರಬ್ರಹ್ಮರುನಿತ್ಯದಿ ।
ಧರೆಜೀವಿಯ ಸೃಜಸಿರಕ್ಷೆನಾಶವಮಾಳ್ಪರ್ ।
ತರಣೀಂದುಗ್ರಹಗಳನಿಶಂ ।
ಚರಿಸುತ ತೊಳಲುವಂದೆನ್ನ ಭಾಗ್ಯಕೆಸರಿಯೆ ॥ ೪೯

## [ ವ ಚ ನ ]

ಇಂತೆಂದು ಸುರಪಾಲಂ ಮನಮರಗುತೆನ್ನೊಳ್ಸುರತರು ಕಾಮಧೇನು ಮರುಜಾಮಣಿ ಯುಚ್ಚೈಶ್ರವಂಗಳಿರ್ದುದನರ್ಥಮಾಯಿತೇ ಮೇಣ್ಣಿತ್ಯಪಾನ ಮಂಗೈವಮೃತಮೇಂ ಸಾಮಾನ್ಯಮೇ ರಂಭೋರ್ವಶಿ ಮೇನಕಾದಿಯ ಪ್ಸರೆ ಯರೆನ್ನೊಳ್ವಾಸಿಸಿದುದಸಾಧಾರಣವೇ ವೃಷಭನೆನ್ನಂಕಿರಿದೆಂದು ಭಾವಿಸಿ ವಾಲವ್ವನ್ನೆನ್ನ ಪಕ್ಷದೊಳ್ವಹಿಸಿ ಪವಡಿಸಿದನೀ ದುರ್ಯಶಾಗ್ನಿಯಿಂದೆನ್ನ ಹೃತ್ಕಮಲತಾಂದಹಿಸದೆ ಮಾಣ್ಬುದೇನೆನುತಕಡಂಗಿ ಧಗಧಗಿಸುತನಲಸಂದ ದಿಂ ಮನಮಿಡುಕುತಂ ಬಸವನನ್ನಿರೀಕ್ಷಿಸುತಲಂತರಂಗದೆಂದಂ ॥ ೫೦

## [ಕಂದಪದ್ಯ]

ಎಲೆಬಸವನಿನ್ನ ಚೇಷ್ಟೆಯು ।
ನೆಲೆಯಂ ದೋರುತ್ತ ಲಿರ್ಪಕಾರಣದಿಂನೀಂ ।
ಛಲದಿಂದೆನ್ನಮುಖಾಗ್ರದೆ ।
ವಿಲಸಲ್ಲಾಂ ಗೂಲವಿತ್ತು ಶಯನಂಗೈದ್ಯೆ ॥ ೫೧

ಕಿರುಕಳರೊಳ್ಗೆಳೆತನತಾ ।
ಪರಸಲ್ಲೆಂಬುವದವೊದಲೆ ಹಿರಿಯುರುಪೇಳ್ವರ್ ॥
ಅರಿಯುದೆನಿನ್ನನ್ನೀಪರಿ ।
ಶಿರಕೇರಿಸಿಕೊಂಡುದೆ ಮಗೆಯನುಭವಮಾಯ್ತು ॥ ೫೨

[ಮತ್ತೇಭವಿಕ್ರೀಡಿವೃತ್ತ]

ಕರದಿರ್ಪಾಯುಧದಿಂ ಮಧಾಂಧ ಶಿರಮಂಚಂಡಾಡಲೋಪಾಶದಿಂ |
ಭರದಿಂಬಂಧಿಸಲೇನು ಪಾದಗಳನಾಂಕೈಗತ್ತಿಯಿಂ ಚರ್ಮವಂ ||
ನೆರೆಸೀಳೀಜಗಭೂತಕಿಟ್ಟುಶರದಿಂ ಶೃಂಗಂಗಳಂಖಂಡಿಸಿ |
ಸುರರೊಳ್ಮೋದವಬೀರಲೇನು ಬಸವಾನೀಮಾಡಿದೀಹಾನಿಯಿಂ || ೫೩

[ ಕಂದಪದ್ಯ ]

ವೃಷಭನೆಕೇಳೆನ್ನೀಜಸ |
ವಿಷಧರಸಭೆಯೊಳ್ವಿನಾಶಗೈದಿಹೆಮೂಢಾ ||
ಪಶುವೆಂದೆಣಿಸುವೆ ನಿನ್ನೊಳ್ |
ಎಸೆವಸುವಾಲವನುಕೀಳ್ದು ಭಿನ್ನವಮಾಳ್ಪೆಂ || ೫೪

—: ವಚನ :—

ಇಂತೆಂದುಮಹಾಕೋಪಾರುಣನೇತ್ರಂಸಹಸ್ರಾಕ್ಷಂ ಮನದೊಳ್ಮರುಗಿ,
ಬಸವನವಾಲದಿರ್ಪರೋಮಮೊಂದಂ ಕೀಳ್ದು ಬಿಸುಡಲ್ಕಾ ಬಸವೇಶಂ
ದುಗುಡಗೊಂಡಂ || ೫೫

[ಕಂದಪದ್ಯ]

ಸುರಪಂ ರೋಮವಚಿಗುಟ |
ಲ್ಬರಕೋಪವತಾಳಿ ನಂದಿಮನ ದುಗುಡದೊಳಂ ||
ಹರಹರಕೀಳ್ದಿಹರೋಮದಿ |
ವರಕೋಟಿಸುಲಿಂಗನಾಶ ಮಾಯ್ತಿಂತೆಂದಂ || ೫೬

ಆಲಿಸುರಾಮೇಶ್ವರನೇ ||
ಶೂಲಿಯ ಪದನಂದಿರೋಮವನ್ನೊಂದೊಂದರಲಿ ||
ಮೂಲೆಯ ತೆರರಾಜಿಪವವು |
ಬಾಲಾರ್ಕನ ತೇಜದಿಂದೆಶೋಭಿಪಲಿಂಗಂ || ೫೭

## [ವಚನ]

ಆಗಳ್ನಂದೀಶಂ ಮನದೊಳ್ಕರುಗುತಂ ಶೂಲಿಯಂನೆನೆಯುತಂ |

## [ಚಂಪಕಮಾಲಾವೃತ್ತ]

ಶಿವಪರದೇವಶಂಭು ಸುರರರ್ಚಿತಪಾದನೆ ವಾಲರೋಮಮಂ |
ತವಕದಿಕೀಳ್ದನಕ್ಕಟಸುರೇಶನು ಭಿನ್ನಮದಾದೆಶಂಕರಾ |
ಭವಣಿಯುಬಂದಿತೀಗಸುರಸಂಘದಿನೋರೆಯತೋರಲೆಂತುನಾ ||
ಭವಹರಪಾಲಿಸೆಂದುಬಿಸುಸುಯ್ದನು ತಾಪದಿನಂದಿದೇವನು || ೫೯

## [ಮತ್ತೇಭವಿಕ್ರೀಡಿತವೃತ್ತ]

ಶಿವೆಕಾಂತಾಸುವಿಲಾಸದೊಳ್ಮನವ ನಾನಾಲಸ್ಯದೊಳ್ತ್ರೋರ್ದೆನೋ
ಭವಮೇಘಾನಿಲಭಕ್ತರಲ್ಲಿಪೆರತಂ ಭಾವಾಗ್ರದೊಳ್ತಂದೆನೋ ||
ಶಿವಸೌಧಾಗ್ರಕೆಬರ್ಪಕಾಲಮರೆದುಂ ಪೊಳ್ತಾಗಿಬಂದಿರ್ಪೆನೋ ||
ದಿವಕಾಂತಂ ನೆರೆಕೀಳ್ದರೋಮವರರೇ ತಾನಾವಪಾಪಾಂಶವೋ || ೬೦

## (ಕಂದಪದ್ಯ)

ಹರಿಹರರೊಳೆರಡುಬಗೆದೆನೆ |
ಪುರಹರಸಭೆಯೊಳ್ಸುಗರ್ವಿಯಾದೆನೆನಾನು ||
ಹರನಾವರ್ಣವಜರೆದೆನೆ ||
ಪರಿಭವಮಿದುಬಂದಿತೆಂತುಸುರಪಾಲಕನಿಂ || ೬೧

## — ವಚನ —

. ಇಂತಾಬಸವಂ ಮನಮರುಗಿ ಜಯರಹಿತಕ್ಷಾತ್ರದಂದಮಂ । ಮಿತ್ರ ರಹಿತದುರ್ದಿನದಂದಮಂ ಪೋಲ್ದು ಜಾಂಗಲಿಕನಿಂ ತಡೆದಜಗರನವೋಲ್ಬು ಸುಗುಟ್ಟಿದೀರ್ಘಶ್ವಾಸಮಂ ನೆಗಳ್ಚಿ ಶಿರವನೊಲಿದೊಲಿದುಯ್ಯಲಾಡು ತಡಿ ಗಡಿಗೆ ಬಿಸುಸುಯ್ದು ಸಂತಾಪದಿಂ ಮಂತ್ರಿಂತೆಂದಂ ॥ ೬೨

### [ಶಾರ್ದೂಲವಿಕ್ರೀಡಿತವೃತ್ತ]

ಪ್ರೀತ್ಯುತ್ಪನ್ನಶರೀರ ಶೋಭಿತಮುನೀಪೂಮಾಲೆಯಂ ಗರ್ವದಿ ॥
ಪ್ರತ್ಯಕ್ಷಂ ಗಜಪಾದಕಿಟ್ಟುಶಿರಿಯಂ ವಾರಾಶಿಯೊಳ್ದೂಡ್ಡುನೀ ॥
ನತ್ಯಂತಾಖಿಲತಾಳ್ದುದಿಲ್ಲವೆ ಮಹದ್ದೈತ್ಯೇಶಸಂಘಾತದಾ ।
ವೃತ್ತಾಂತಂ ಮರೆದಿಂದ್ರರೋಮವಳಿದ್ದೈನೀ ನೆಂತುಬಾಳಿರ್ಪೆಯೋ ॥ ೬೩

## [ವಚನ]

ಎಂದಾವೃಷಭಂ ತನ್ಮನದೊಳ್ ॥ ೬೪

### [ ಉತ್ಪಲಮಾಲಾವೃತ್ತ ]

ಪಾಪಿಯಕೋಪದಿಂ ಪರಮದೇವಸಭಾವಲಯಂ ವಿಸರ್ಜನಾ ॥
ಲಾಪದೊಳೀಗಪೋಪಹದನಂ । ಕುಹಕಾರ್ಯಮದಾಗಿತೋರ್ಪುದೆಂ ॥
ದೀಪರಿಮಾನಭಂಗಮನೆನಾಂ ಪಡೆದಿರ್ಪುದುಹಾಸ್ಯಮೆಂದುತ ।
ತ್ತಾಪದೆಪೋಲ್ದನಾಬಸವಕತ್ತರಿಗಿಟ್ಟ ಸುಪೂಗದಂದಮಂ ॥ ೬೫

### [ಕಂದಪದ್ಯ]

ಈಪರಿಯೊಳುಭಯಸಂಕಟ ।
ತಾಪದಿನಂದೀಶತಾನುಮನಮಿಡುಕುತಲಿ ॥
ಕೋಪವತೋರದೆ ಸಭೆಯೊಳ್ ।
ಕಾಪಾಲಿಯ ಧ್ಯಾನಮಾಡುತಿರ್ದನುಕೇಳ್ಕೈ ॥ ೬೬

ಮನದೊಳ್ಮಿಡುಕುತಬಸವಂ ||
ಘನತರಸಭೆಯಲ್ಲಿ ಕಾಲಮಂ ತುಂಕಳೆದಂ ||
ಚಿನುಮಯ ದೇವನಭಜನೆಯ |
ದಸುನಯದಿಂ ಹೃದಯಪೀಠರಂಜಿತಮಾಗಿ || ೬೭

ದುಷ್ಟನವಿಭವಂಮೇಣ್ಸಿರಿ |
ಶಿಷ್ಟನಮನತಾಪಬಾಧೆಯಿರ್ಪುದೆ ಬಹುಕಾಲ್ |
ನಷ್ಟಮುದಪ್ಪುದುತಿಳಿಸುರ |
ಶ್ರೇಷ್ಠಂ ನಂದೀಶಗಿತ್ತ ತಾಪಂ ರಾಮ || ೬೮

( ವಚನ )

ಇಂತಾಗಲಾ ಸಮಯದೊಳ್ದಿನಕರನಸ್ತಾಚಲಕಿಳಿದಂ || ೬೯

( ಚಂಪಕಮಾಲಾವೃತ್ತ )

ಧರೆಯೊಳಗುಗ್ರಯೋಗದಿರುವಂ ಸುನಿಮಿರ್ಚಿಸಿಗೋತ್ರಹತ್ಯಮಂ ||
ನಿರುತದೊಳಿತ್ತುಖೂಳ ಮಧುಪಾನರ ಸಂಗದಿಕಾಲಮಾರ್ಚಿಸಿ ||
ದುರಿತಕೆಹೇಸದಂತೆ ದ್ವಿಜಕಾಂತಿಗೆಭಂಗವನಿತ್ತು ಬಾಳುವರ್ |
ದುರುಳರ ಪೋಲ್ವಶಕ್ರಲಯುಪೊಂದ್ವುದನಸ್ತದಿತೋರ್ದನಾರವಿ || ೭೦

[ಮತ್ತೇಭವಿಕ್ರೀಡಿತವೃತ್ತ]

ದಿವಗೈಯ್ಯಂಬಹುವೇಗದಿಂ ಬಳಲುತಂ ಬಾಯಾರಿನೀರ್ಗಾಣುವ
ನೆವದಿಂ ಪೋದನೊಪಶ್ಚಿಮಾಬ್ಧಿಗಸುರೇಶಂ ಕೋಪದಿಂ ನಂದಿಗಿ |
ತ್ತವಮಾನಂ ನೆರೆಕಂಡುರಕ್ತನಯನಂ ತಾನಾದನೋ ನಂದಿಯು ||
ಸುಮನಸ್ಸಂ ಗದಿಜಾರಲೆಂದನೆನೆತಾನಸ್ತಾಬ್ಧಿಯೊಳ್ಕಂಡನು || ೭೧

[ ಕಂದಪದ್ಯ ]

ಕಮಲಾಪ್ತನಸ್ತಗೈಯಲ್ ।
ಕಮಲಾಸನ ಸಭೆವಿಮುಕ್ತ ಘೋಷವದೋ೯ರ ॥
ಲ್ಕಮಲಾಂಕಮೌಳಿಸಭೆಯಿಂ ।
ಕಮಲಾಂಬಕಪೂರ್ಣವೃಷಭಪೋದಂಬೇಗಂ ॥ ೭೨

[ವಚನ]

ಇಂತಾಮುನಸಂತಾಪಮಾಂತು ಬಸವಂ ಸಭಾವಿಸರ್ಜನ ಮಂಗೈದು ನಿಜಭುವನಮಂ ಪೊಗದೆ ಕಟ್ಬಾರಣ್ಯಪಥವಿಡಿದು ಸುರೇಶಪಶುಶಿವ ಸಭೆ ಯಲ್ಲಿರ್ಪನ್ನೆಗಂ ಶಿವಧರ್ಮಪಲಾಯನಮಂ ಗೈದು ಗುಹೆಯಂಸೇರ್ವುದಂ ತೋರಿಸುವತೆರದಿಂ ಪೋಗೆ ಸಕಲದಿವಿಜರಿದ ನರಿಯದಜ್ಞಾನದಿಂ ಸ್ವಗೃಹ ಕಾನತರಾದರ್ ॥ ೭೩

[ಗದ್ಯ]

ಇದು ಶ್ರೀಮದ್ವೀರ ಶೈವಾಚ್ಯಾರಧು ರೀಣಶಾಂತವೀರ ದೇವರೊಡಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾ ಕಾವ್ಯದೊಳ್ಪ್ರಥಮಾಶ್ವಾಸಂ ಸಮಾಪ್ತಂ ಅಂತು ಸಂಧಿ ಯೊಂದಕ್ಕ ಗದ್ಯಪದ್ಯಂಗಳೊಂದು ನೂರಾವಂದಕ್ಕಂ ಮಂಗಲಮಹಾ

# ದ್ವಿತೀಯಾಶ್ವಾಸ ಪ್ರಾರಂಭ

## [ಚಂಪಕಮಾಲಾವೃತ್ತ]

ಭರದೊಳುಬಂದುಭೃಂಗಿ ವರನಾಟ್ಯವ ನಾಡುವಕಾಲದಲ್ಲಿತಾ ||
ಗಿರಿಸುತೆ ಕೋಪಮಾಂತುತನು ಭಾಗದೆತನ್ನಿರುವಂಶಬೇಡಲು ||
ಬರೆಸೆಳೆದಿತ್ತು ಮತ್ತೆ ಮೊದಲಂದದಿ ತೋರುವಹಾಸ್ಯಗಾರಗಾ ||
ದರದೊಳುಕಾಲನೊಂದನುರೆ ಪೆರ್ಚಿಸಿಕಾಯ್ದಿಹದೇವ ರಕ್ಷಿಸ್ಲೆ || ೧

## [ಮಹಾಸ್ರಗ್ಧರಾವೃತ್ತ]

ಮಹಿದೇರಂ । ಮಾಧವಾಣ್ಮಂ । ಮಿಹಿರನಯನ । ಭೂಷಂಸು ।
ಮೀನಾಂಕನಾಶಂ ||
ಮುಹಿರಃಕಾತಾವರಂ । ಮೂಷಕರಥಪಿತಂ ತಾಮರುಚಾಪಾದಿಮೈತ್ರಂ ||
ಮೊಹಿನೀಕಾಂತಧ್ವಜಂ । ಮೋಕ್ಷಕರಮಿಲಿತ । ಮೌನೀಗಣೋದ್ಘೋಷ ।
ಮಂತ್ರಂ ||
ಮಹದಂ ಭೋಜಾತಜಂ । ಮುಖ್ಯವಿಭುದವಿನುತಂ । ಪಾಲಿಕೆನ್ನಂ ।
ಮಹೇಶಂ || ೨

## [ವಚನ]

ಅಂತುಮಹಾವೃಷಭಂ ವ್ಯಾಕುಲಚಿತ್ತದಿಂ ಗಹನವಿಪಿನಮಂ । ಸಾದ್ದ್ ಸಮಯದೊಳ್ಗಗನವರುಣಚ್ಛಾಯೆಯಿಂ ರಂಜಿಸಲ್ಕಾ ಸಂಧ್ಯಾರಾಗಮನೆ ನೆಂದುಬಣ್ಣಿಪೆಂ || ೩

## [ಮತ್ತೇಭವಿಕ್ರೀಡಿತವೃತ್ತ]

ನಿಜಕಾಂತಂಶರಪಂಘದೊಳ್ಮುಳುಗೆಮುನ್ನಿರ್ಗಂಥಭೂಷಂಗಳಂ ।
ತ್ಯಜಿಸುತ್ತಾರುಣವಸ್ತ್ರಪಂ ವಿಧವೆಯೋಮಂ ತಾಳ್ದಳೋಮೆಣಿದು ॥
ಆಜಮುತ್ತಾತನುಬರ್ಪಹಂಸನಿದಿರೊಳ್ತಾನಿಟ್ಟರತ್ನಾಂಶುವೋ ॥
ರಜನೀಸಂಚರ ನಂದಿಶೋಕಶಿಖಿಯೊಪೇಳೆಂಬೆನಾಕಾಲಮಂ ॥ ೪

## (ಕಂದಪದ್ಯ)

ಸಂಧ್ಯಾಕಾಲದ ಸೊಬಗಿನೊ
ಳೊಂದೊಂದಿರುತಿರ್ದತಾರೆಗಳಕಾಂತಿಯುತಾ ॥
ಸುಂದರಿಯರ ಮುಖವರ್ಣದೊ ।
ಳೊಂದಿದಮೂಗುತಿಯುಮುತ್ತಿನಂತಿರ್ದಪುದು ॥ ೫

## [ಚಂಪಕವಲಾವೃತ]

ಪಡುವಲುಸಂಜೆಗೆಂಪುಮದುರಂಜಸೆ ಕಳ್ತಲೆಪರ್ಬಿಕಂಜದ ॥
ಗಡಣವುಮುಚ್ಚಿತಾವು ಸೆರಗೊಂಡವು ಭೃಂಗಸಮೂಹತೇಜದಿಂ॥
ದುಡುಗಣಶೋಭೆಯಾಂತು ಜಗಮೆಲ್ಲವು ಕೃಷ್ಣಮದಾಗಿರಂಜಸಲ್ ।
ಗಡಿಬಿಡಿಯಿಂದೆನಂದಿಬಹುವೇಗದಿ ಕಾನನ ಪೊಕ್ಕ ಶೋಕದಿಂ ॥ ೬

## [ವಚನ]

ಅಂತಾಸಂಧ್ಯಾರಾಗದೊಳ್ಮಿನುಗುವ ತೇಜಃಹಿತಂ ಬಸವಂ ಪೋಪಾ ಗಳ್ಕಗ್ಗತ್ತಲೆಮುಸುಂಕಿ ಧರೆಯೆಲ್ಲಂ ಕೃಷ್ಣಮಯಮಾಗಲ್ ॥ ೭

## (ಮತ್ತೇಭವಿಕ್ರೀಡಿತವೃತ್ತ)

ಶತಪತ್ರಪ್ರಿಯಕೋಪದೆಮ್ಮ ಕುಲಮಂ ನಿರ್ಮೂಲಮಂ ಮಾಡುವೋ।
ಲತಿರೋಷಾಂಕಿತಚಿತ್ತನಾಗಿಮೆರೆವಂ ನಾನೆನ್ನ ಸುಧೈರ್ಯದಿಂ ॥
ಜತಿಗೊಂಡೀಕ್ಷಿಸಿ ಕೊಲ್ವೆನೆಂದುತಮತಾಂ ಗಾಢತ್ವದಿಂ ತೋರ್ಪುವೋಲ್
ಕ್ಷಿತಿಯೊಳ್ಪರ್ಬಿತೆತೋರಿತಾನಿ ಬಿಡಮಾಗಿರ್ಪಂ ಘಘೋರಾಂಧವುಂ ॥ ೮

## —[ ವಚನ ]—

ತತ್ಪರ್ಯಾಯದಿಂ ಮೆರೆವಕಾಲದೊಳಾನಂದೀಶ ನುಷ್ಣಶ್ವಾಸರಂಜಿತ ನಾಗಿ ಸಿದ್ಧಾದ್ರಿಯಂಕಂಡದರೊಳಿರ್ಪ ಸಿದ್ಧಾಶ್ರಮದೊಳ್ಪವಡಿಸಿಗಹನತಪ ಮಂಗೈಯಲನುವಾಗಲಿಲ್ಲಿರ್ಪಮೃಗಕುಲಂ ವೃಷಭಭಕ್ತಿಯಿಂ ಗತವೈರಮಾಗಿ ಸೇವೆಗೈಯಲಣುಮಾತ್ರಂ ಶಾಂತಿಗೊಳ್ಳದಿರಲಾಖಗಕುಲಂ ಪಕ್ಷದಿಂಬೀಸಿ ಯಾಜೀವನನುರೆತೋಷಗೈಯಲ್ಕನದ ದುಗುಡಮಂ ಬಿಡದೆನಂದೀಶಂ ತಪ ದೋರಲಾ ಸಮಯದೊಳ್ಕೀಕರನಿಶಿ ಸಮಯಮಡಗಿ ಪಗಲ್ದೋರುವ ಕಾಲ ಮೊದಗಲಾಗಮಾರ್ತಾಂಡಂ ಮೂಡಣವೆಟ್ಟದಡಿಯೊಳ್ನಿಂತಿಂತೆಂದಂ ॥ ೯

## [ ಕಂದಪದ್ಯ ]

ಬಸವನಶೋಕವುನಮ್ಮದು ॥
ಬಸವನ ಬಹುತಾಪನಮ್ಮದೆಂಬುವದಲ್ತೆ ॥
ಬಸವಂ ಕಾಣದವೋಲಿರೆ ।
ವಸುಧಗೆ ನಾವೋರೆತೋರಲೆಂತಹುದೆಂದಂ ॥ ೧೦

ಬಸಲಂದ ಮಹಿತಮಹಿಮಾ !
[illegible] ಂದಿಬೆನಾಸ
ಮು[illegible] ಯಂ ಬಿ[illegible]ಲ್
ಮದನಾರಿಯು ಮೆಚ್ಚಲಾರನೆಂದಂ ರವಿತಾಂ ॥ ೧೧

ಇಂತೀನಿಶ್ಚಯದಿಂ ರವಿ ।
ಕಂತುವಿನಾರಾತಿ ಗಂಜಿಮುಖದೋರದೆತಾಂ ।
ಚಿಂತೆಯೊಳಾಪೂರ್ವಾದ್ರಿಗೆ ।
ನಿಂತಂ ಮರೆಯಾಗಿಕೇಳ್ವುದೆಂಪಂ ಚಿನ್ನಂ ॥ ೧೨

## (ವಚನ)

ಇಂತಾದಿನಕರಂ ಧರೆಯಂ ಬೆಳಗದಿರಲವನ ಬಳಿವಿಡಿದು ಸಪ್ತಜಿಹ್ವಂತನ್ನತೇಜಮಂ ಕೊಡದಿರಲಣುವಾದೊಡಂ ನಿಶೆಯಡಗದ ಹೋರಾತ್ರಿಗಳೆಣಿಸದಷ್ಟುಗತಮಾಗಲುತ್ಪಾತಮಾರುತಂ ಸ್ವಕಾರ್ಯನಿಷ್ಠನಾಗಲ್ಬಾಗಗನಮೊಂದಾಗಿಕುಲಾಲದಂಡಮಂ ಪೃಥ್ವಿಪೋಲಲ್ಕಾಶಿಯೊಳುಡುಗಳ್ಪತಿತಮಾಗಲ್ಕಾಳಾದರಾಜ್ಯದಂ ತಿರ್ಪುದೀಯುತ್ಪಾತ ಮೇನೆಂದುಸುರಕುಲಂ ಗುಜಗುಜಸಿ ಪಂಕೇಜಪುತ್ರನೊಳ್ಬೆಸಗೊಳಲ್ತವಕದಿಂ ಪೊರಮಟ್ಟುದು ॥ ೧೩

## (ಉತ್ಪಲಮಾಲಾವೃತ್ತ)

ಭೀತಿಯತಾಳ್ದುಪೋಪಖಿಲನಿರ್ಜರರೆಲ್ಲರು ನೇತ್ರವಿಲ್ಲದಂ ।
ತಾತುರದಿಂದ ತಮ್ಮ ಧೃಡ ತಳ್ಕಿಸಿ ಜ್ಯಾರುತ ಬೀಳುತೇಳುತ ।
ಘಾತವಪೊಂದಿವಾಣಿವರ ವಂಘ್ರಿಯಕಾಣುತ ಲೋಕಕರ್ತನೇ ।
ಸೋತೆವುನಾವುಪಾತಕಿಗಳೆಮ್ಮನುರಕ್ಷಿಸು ರಕ್ಷಿಸೆಂದರು ॥ ೧೪

## [ಕಂದಪದ್ಯ]

ಅಮರಾಳಿ ಬಂದುನಮಿಸಲ್ ।
ಕಮಲಾಸನ ತನ್ನಶೋಕಪೇಳ್ದಂಬೇಗಂ ॥
ತಮದೊಳ್ವಾಣಿಯನಗಲಿದೆ ।
ನಮಮಾ ನಾದುಃಖಮೆಂತು ಸೈರಿಸಲೆಂದಂ ॥ ೧೫

(ವಚನ)

ಅಂತುಕಮಲಾಸನಂ ಸುಮನಸರೊಳುಸುರಿತಮಪರಿಹಾರಗೈವಡೆ ಕಮಲಾಂಚಕನಲ್ಲ ದನ್ಯರಾರೆಂದುಸರ್ವರಂ ಮನ್ನಿಸುತವರ್ಗಳಂ ಕೂಡಿ ಕೊಂಡಾಕಾಮಪಿತನಬಳಿಗೈಯಲಾತಂ ವಿಮಲಸುಖಾಸನದೊಳ್ಕುಳ್ಳಿರಿಸಿ ಯವರಹದನಮಂಕೇಳ್ದಂ ॥ ೧೬

(ಕಂದಪದ್ಯ)

ಸುರವರರೆನಿಮ್ಮಬರುವಿನ ।
ಪರಿಯಂ ನಾನೀಕ್ಷಿಸಲ್ಕೆತಮಘಾತದಲಿಂ ।
ದುರುತರ ಕಷ್ಟವಸಹಿಸದೆ ।
ತ್ವರದಿಂಬಂದಂತೆ ಕಾಣ್ಬುದೆಂದಂ ಹರಿತಾಂ ೧೭

ಎಲೆಸಿದ್ಧರಾಮನೀಕೇಳ್ ।
ಮಲಹರ ಶಖನಿಂತುಪೇಳೆ ಸುರಗಣಮೆಲ್ಲಂ ।
ನಿಲಲೀಸದ ತಮಘಾತದ ।
ನೆಲೆಯಂ ನಾವರಿಯವೆನ್ನೆಹರಿಚಿಂತಿಸಿದಂ ॥ ೧೮

(ಮತ್ತೇಭವಿಕ್ರೀಡಿತವೃತ್ತ)

ಇದುತಾನೇನಜಮುಖ್ಯನಿರ್ಜರರೆತಾಪಿಂದಾದಕಲ್ಪಾಂತದೊಳ್ ॥
ಮದನಾರಾತಿತ್ರಿನೇತ್ರಮಂ ಗಿರಿಜೆತಾಂ ಸಲ್ಲೀಲೆಯಿಂ ಮುಚ್ಚಲಾ ॥
ಗುದಯಂ ಕಾಣದೆಬೀಳ್ದಘೋರತಮತಾಂ ಬಂದಿರ್ಪುದೋಪನ್ನಗಂ ।
ಮೊದಲಿತ್ತಂತಹ ಕಾಲಕೂಟಮಹುದೋನಾಕಾಣೆನೆಂದಂ ಹರಿ ॥ ೧೯

(ಕಂದಪದ್ಯ)

ತಿಳಿಯದುನನಗಿದರಂಗಂ ।
ನಳಿನಜಸುರವರಗೆ ಮುಂದೆಗತಿಗೊಡುವರುದಾರ್ ॥
ಗಿಳಿದೇರನನಾಶನಪದ ।
ನಳಿನವಮರೆ ಹೊಕ್ಕಡಲ್ಲಿಸುಖ ಮುಂಟೆಂದಂ ॥ ೨೦

ತಮಮಂ ನಾಶಿಪವಿಕ್ರಮ ।
ತಮನಾಶಕನೇತ್ರನಲ್ಲ ದನ್ಯರಪಾಡೇಂ ॥
ಸುಮನರಿಪ್ಪೈಣವತಾಳಿರಿ ।
ಸುಮನಸದಿಂದೀಶನಲ್ಲಿಗೆಂದಮುರಾರಿ ॥ ೨೧

(ವಚನ)

ಇಂತಾನಂಗಪಿತನುಸುರೆ ದಿವಿಜರೊಂದಾಗಿ ನೀನಲ್ಲಿ ಗೈತಹುದೆಂದು ಬೇಡಿಕೊಳಲಾ ಮುರಹರಂ ಸುರವರರ ಬೆರತು ಪೈಣಗೊಂಡೀಶನಂ ಕಂಡಂ ॥ ೨೨

(ಕಂದಪದ್ಯ)

ಹರಿಸುರಗಡಣದಿಕೂಡುತ ।
ಭರದಿಂ ಸ್ಮರಕಾಯಹರನಸನ್ನಿಧಿಯಾಂತು ॥
ಚರಣಕೆ ನಮಿಸುತಬಾಧೆಯ ।
ನರಿಕೆಯುತಾಮಾಡಿಕೊಂಡನತಿ ವಿನಯದಲಿ ॥ ೨೩

ಹೇದೇವ ಹೇಮಪುರವರ ।
ಮಾಧವನಯನಾರ್ಚಿತಾಂಘ್ರಿಪಂಕಜಭೂಪ ॥
ಛೇದಿಸುನಮ್ಮಯತಾಪವ ।
ನೀದಿನಬಂದೊದಗಿದಂಥ ಘೋರಾಂಧದಲಿ ॥ ೨೪

ಸರಸಿಜಕುವರಂ ಬಂದಿಹ ।
ಸುರಗಣದಿಂ ಕೂಡಿರುದಿತವೆನಿತೇನೆಂಬೆ ॥
ಪೊರೆವುದುತಮ್ಮಯನೇತ್ರದ ।
ಲಿರುತಿಹಕಾಂತಿಯಲಿತಮವಪರಿಹರಿಸುತಲಿ ॥ ೨೫

ಶರಧಿಯಮಥನದೆಪುಟ್ಟಿದ ।
ವರವಿಷಮಂ ನೀನುತಾಳ್ದು ನೀಡಿದೆತೋಷಂ ।
ಪುರಗಳನುರುಹಿದೆತಮಮಿದ ।
ಪರಿಹರಿಪುದು ನಿನಗೆ ಗಹನಕಾರ್ಯಮದೇನೈ ॥ ೨೬

ಬಳಲುವದಿವಿಜರವೊರೆಕೇ ।
ಳಳಲುವ ಘನತಾಪ ರೂಪಗಾಣದತವಮಿಂ ।
ದಳುಕಿಸಿ ರಕ್ಷಿಸುಬೇಗನೆ ।
ಗಿಳಿದೇರನ ನಾಶಧೀಶ ಸದ್ಗುಣಕೋಶ ॥ ೨೭

[ವಚನ]

ಇಂತಾನಿರ್ಜರಬಲಂ ಕಪರ್ದಿಯಂ ಪ್ರಾರ್ಥಿಸಿತಮ್ಮಬಂಧನವನ್ನಿರೂಪಿಸಲ್ಕೆ ಕರುಣಾಸಮುದ್ರ ನದ್ರಿಜಾವಲ್ಲಭನಾಕರ್ಣಿಸಿ ತಮವೊದಗಿದರೀತಿಯನರಿದು ತಾನರಿಯದಂದದಿಂ ನಟಿಸಿ ಹರಿಯಜರಂಕೇಳ್ದಂ ॥ ೨೮

[ಕಂದಪದ್ಯ]

ಹರಿಯಜರೆ ನಿಮ್ಮಬರುವಿಕೆ ।
ಸಿರಿಗೊಡಮಂ ತಂದು ಬಡವತಾನಿದ್ದೆಡೆಯೊಳ್ ॥
ಇರಿಸುತೆಮೋದವಪೊಂದುವ ।
ತೆರನಂ ನೆರೆತೋರಿತೆನಗೆ ನಾಂಬಲುಧನ್ಯಂ ॥ ೨೯

ಅದೊಡೆಪೇಳಿರಿತಮತಾ ।
ನೀದಿನಪರ್ಬಿರುವಹದನ ವೇನೆಂದೆಂಬೆ ।
ಮೇದಿನಿಯೊಳ್ಮಖದೋರದ ।
ಲಾದಿನಪಂ ತಾನುತಡಪಗೈದಿಹುದೇನು ॥ ೩೦

[ವಚನ]

ಇಂತನಂಗನಾರಾತಿ ಬೆಸಗೊಳಲಜ ಹರಿಗಳರಿಯೆವೆಂದ ದಡಿದಾವರೆಗಳಿಗೆರಿಗಿ ಬಿನ್ನಪಂಗೈಯೆಗಿರಿವೈರಿಯುಂ ಕರೆದು ಕರಿವೈರಿಯುಸುರ್ದಂ ॥ ೩೧

[ಕಂದಪದ್ಯ]

ಎಲೆಶಕ್ರಕೇಳುನಿನ್ನಿನ ।
ವಿಲಸತ್ಸಭೆಯೊಳಗೆ ಷಂದ ನಿರ್ಜರ ಕುಲಿಸಿ ॥

ಕಲಹನ ದಾವರಿಸಿತೊಮೇಣ್ ।
ಛಲವೊದಗಿತೊಪೇಳು ಬೇಗಸಾಸಿರನಯನಾ ॥ ೩೨

ಸುರರೊಳ್ಳಿನ್ನಪ್ಪಂದದಿ ।
ವಠನಯನಗಳಿರ್ಪುದಿಲ್ಲ ಮೆಲ್ಲಗದರಿಂ ।
ಪರಿಯಂಪೇಳುವದೊಳಿತಿದು ।
ಮರೆಮಾಜುವದುಚಿತಮಾಗದೆಲೆಸುರಕಾಂತಾ ॥ ೩೩

ಈಪರಿನಷ್ಟಂ ಕಷ್ಟಂ ।
ಕೋಪಿತನಾಗಿರ್ಪಭಕ್ತತಾಪವಿದಲ್ತೇ ॥
ರೂಪವತೋರದೆರವಿತಾಂ ।
ಗೋಪಿತನಾಗಿರ್ಪನೇಕೆಪೇಳಿಲೆ ಸುರಪಾ ॥ ೩೪

## [ವಚನ]

ಎಂದಾಶಂಕರಂನಯದಿಂ ದಿಂದ್ರನಂಬೆಸಗೊಳಲ್ಕಂದೀಶನಿಂದಾದವ ಮಾನವುಂ ಪೇಳ್ವೆನೋ ಪೇಳದಿರ್ಪೆನೋ ತಾನೆಂದಾಲೋಚಿಸಿಶಕ್ರಂ ನಾನ ರಿಯೆನೆಂದುಸುರಲ್ಕೆ ಪರಶಿವಂ ಶಿವಭಕ್ತದ್ರೋಹದಿಂ ನೊಂದಮನದೊಳ್ಪಸಿ ಭಾಷೆಯೊಂದುಗೂಡಿಖತಿಯಿಂ ಕ್ರೋಧವಿಮ್ಮಡಿಸೆ ಚಿತ್ತನೊಂದು ಸಂಕ್ರಂದ ನಂಗಿಂತೆಂದಂ ॥ ೩೫

## [ಮತ್ತೇಭವಿಕ್ರೀಡಿವೃತ್ತ]

ಇದುಲೋಕಂಗಳ ನಾಶಗೈವ ತೆರದಿಂಗಂ ಭೀರಮಾಗಿರ್ಪುದಿಂ ।
ತಿದುಸದ್ಭಕ್ತರ ತಾಪದಿಂದೊಗೆದ ಧೂಮಂಪರ್ಬಿತಾಕಾರಣಂ ॥
ಕದನಂ ಬಂದಿರವೇಳ್ಕುವಿಲ್ಲದೊಡೆತಾನಿಂತಾದುದೇ ತಾಪಮೀ ॥
ಹದನಂ ಪೇಳುವುದೀಗ ಮಾಜಿದೊಡೆನೀಂ ಶಾಪಕ್ಕೆಪಕ್ಕಾಗುವೆ ॥ ೩೬

## [ಕಂದಪದ್ಯ]

ಶಿವನಿಂದೆಗೈದೆ ಮನದಲಿ ।
ಶಿವಭಕ್ತನಮಾನವಳಿದೆ ನಡುಸಭೆಯಲ್ಲಿ ॥

ಶಿವಗಣದೆಪುಶಿಯುನಾಡಿದೆ ॥
ಶಿವಸಭೆಯಿದು ನೋಡಿ ತಿಳಿದುಪೇಳಿಲೆಸುರಪಾ ॥ ೩೭

ವಚನ

ಇಂತೆಂದು ಘು ಡಿ ಘು ಡಿ ಪ ಶಂಕರನಿರವನ್ನೀಕ್ಷಿಸುತಲಿನ್ನುನಾಂ ಮಾಜುವದೊಳ್ಳಿತಲ್ಲವೆಂದು ತಾನಾಲೋಚಿಸಿಕಿಂಕರತ್ವಮಂತಳೆದುಸುರಪಂ ದೇವನಿಗಡ್ಡಬೀಳ್ದು ಕರಗಳಂ ಮುಗಿದುನಂದಿಯಿಂ ನಡುಸಭೆಯೊಳಗಾದವ ಮಾನದಿಂ ಪಾಲದಿರ್ಪ ರೋಮಮೊಂದಂನಾಂ ಕೀಳ್ದೆನಲ್ಲದೆ ಪೆರತರಿಯೆ ನೆಂದುಗದಗದಿಪಸಹಸ್ರಾಕ್ಷನಮೇಲೆಕಡಂಗಿಪಿನಾಕಿಯೆಂದಂ ॥ ೩೮

[ಮತ್ತೇಭವಿಕ್ರೀಡಿತವೃತ್ತ]

ಎಲೆದುಷ್ಟಾತ್ಮಮದಾಂಧ ಕೇಳ್ಸುರಪನೇ ನೀನಿಂಥದುಷ್ಕೃತ್ಯಮಂ ॥
ಛಲದಿಂ ಮಾಡುತಲಿನ್ನಧರ್ಮಸದನಂ ಪ್ರೇಮಾಬ್ಧಿಸಂಪೂರ್ಣನಂ ।
ವಿಲಸದ್ವಾಲದರೋಮಕೀಳ್ದು ಗಣಿತಕ್ಕ ಬ್ಜಂಗಳಂ ಮೀರಿದ ।
ಪಲಲಿಂಗಂಗಳನಾಶಗೈದಿಕರಶಾ ನಂದೀಶನಂ ನಮ್ರದಿಂ ॥ ೩೯

(ಕಂದಪದ್ಯ)

ಮಲಗಲ್ಬಸವನ ಬಾಲಂ ।
ಛಲದಿಂದಿತ್ತಿಹುದಿದೆಂದು ಮಂದತೆಯೊಳ್ನೀಂ ।
ವಿಲಸದ್ರೋಮವನಳಿದಿಹ ।
ಕುಲಗೇಡಿಯೆಪೋಗು ನಿಲ್ಲದೆನ್ನಯಮುಖದಿ ॥ ೪೦
ಸಿದ್ಧನು ನಿನ್ನಾಟೋಪಕೆ ।
ಕ್ರುದ್ಧಂತಾನಾಗಿ ಸಭೆಸಮಾಪ್ತಿಯೊಳಂತಾ ॥
ನೆದ್ದನುಮನ ಮಿಡುಕುತೆಮೇಣ್ ।
ಸಿದ್ಧಾದ್ರಿಯುಕಂಡನಾಗವನದೊಳ್ತಮದೊಳ್ ॥ ೪೧

ಬೇಗನೆಕರತಾವೃಷಭನ ।
ಬಾಗುತಚರಣಕ್ಕೆ ಕೋಪನಂದಿಸಿ ನಯದಿಂ ।
ಸಾಗದೆ ನಿಂತೊಡೆನೀಂಸಲೆ ।
ಪೋಗುವೆಶಾಪವನು ತಾಳ್ದು ಭೂಮಿಯೊಳೆಂದಂ ॥ ೪೨

## — ವಚನ —

ಈಶನಾನಂದಿಯಂ ತರುವದೆಂದಾಗ ಕಟ್ಟಾಜ್ಞೆಗೈಯಲ್ಸುತ್ರಾಮನ ತಿಭೀತಿಯಿಂ ಬಿನ್ನಪಂಗೈದಂ ॥ ೪೩

## [ ಉತ್ಪಲಮಾಲಾವೃತ್ತ ]

ಪೋಪೆನುದೇವ ನಾಂಪರಮನಂದಿಮಹೇಶನ ಪಾದತಾಣಕೆ ।
ಕೋಪವಶಾಂತಗೈ ಮಕರ ತರ್ಪೆನುಕೇಳ್ಮಹದಂಧಕಾರದಿಂ ।
ರೂಪವು ಶೂನ್ಯಮಾಗಿ ನಯನಂಗಳುಕಾರ್ಯವಿಮುಕ್ತವಾದವಿಂ ।
ದೋಪನೆಬೇಗನಿಮ್ಮ ಬಲನೇತ್ರದಿನೇಶನನಿತ್ತು ರಕ್ಷಿಸೈ ॥ ೪೪

## (ಕಂದಪದ್ಯ)

ಸುರಪನಬಿನ್ನಪಮನ್ನಿಸಿ ।
ಪರಶಿವನಯನಾಗ್ನಿಸೂರ್ಯಚಂದ್ರರನಾಗಲ್ ॥
ತ್ವರಿತದಿ ನೀಡಲುತಮಹಾಂ ।
ಪರಿಯುತಧರೆಯಲ್ಲ ಮುನ್ನದಂದವುದಾಯ್ತು ॥ ೪೫

## [ ವ ಚ ನ ]

ಗಿರಿಜಾವರಂ ಹರಿತ್ರತಯಮಂ ಪಸರಿಸಲ್ಧರೆಯೆಲ್ಲಂ ಕಾಂತಿಯಿಂ ರಂಜಿಸಿ ಬಂಡುಣಿಗಳಲರಸೆರೆಯಂ ಪರಿದುಪಾರಿಝೇಂಕಾರವಿಡಿದು ದಿಗಲಂಕಾರಮಂತಾಳ್ದು ಪಕ್ಷಿಗಳುಲಿಯೆ । ತನುಪೊಕ್ಕರಿಸ ಮೃಗಗಳುಂ ಬಿಂತಿ ಸಿಬಿಲಮಂ ನಾದರ್ಪವಾಸಮಯಮೊಳ್ಸರಸಂದಣಿಗೆ ನಯಸಂಪನ್ನವಾಗಿ ಯುದಯಂಗೈದಂತಾಗಲಾ ಸಕ್ರಂದನಂ ದುಗುಡಮಾಂತು ॥ ೪೬

## [ಚಂಪಕಮಾಲಾವೃತ್ತ]

ದಿವಿಜರದೇವನೆಂದು ಶತಯಾಗಸುಪೂರಿತನೆಂದುಶೋಭಿಪ ||
ಪವಿಧರನೆಂದು ಕಲ್ಪಕುಜಶುಭ್ರಗಜಾಶ್ವಗಳಾಣ್ಮನೆಂದುಮೀ |
ಣ್ಣವರುಣವಾಯುವಗ್ನಿಯಮನೈರುತಿ ಮುಖ್ಯರಪಾಲನೆನ್ನುತೀ ||
ದಿವಸದೆಹೀನನಾಗಿ ಪಶುಪಾದಕೆ ಬೀಳಲು ಪೋಪುದಾಯಿತೇ || ೪೭

## [ವಚನ]

ಇಂತಾನುತಾಪದೊಳಿಂದ್ರಂ ಮನಂಮರುಗಿದೇವನ ಕ್ರೋಧಮಂ
ನೆನೆದು ಬೆದರುವನೊಮ್ಮೆಯಭಿಮಾನದೊಳ್ಬಿರ್ದು ಕಠಿಣನಾಗುವನೊರ್ಮೆ
ಮೆಣ್ತನ್ನಾತ್ಮದೊಳ್ಕೊಂದುಕೊಂಡು || ೪೮

## (ಕಂದಪದ್ಯ)

ಕರೆಸಿದಸುರಗಡಣವತಾಂ ||
ನೆರೆಸಿದ ಘನಸಭೆಗು ನಿದಕೆಹಂಚಿಕೆಯೇನೈ ||
ಕಿರುಕುಳ ನಂದಿಯುಪೋದಂ |
ಬರದಿರ್ದೊಡೆಶಾಪ ತಾಳ್ವೆನೆಂದ ಬಿಡೌಜಂ || ೪೯

ಎಲೆಸಿದ್ಧರಾಮ ನೀಕೇಳ್
ಮಲೆತರಮನದಲ್ಲಿ ನಯುಗುಣೋದಯವುಂಟೇ ||
ಕಲುಷಂಪುಂಜಿತಯಪ್ಪುದು |
ಸಲೆಸತತದಿಮಧುವನುಂಡ ಗರ್ವಿತಸಭೆತಾಂ || ೫೦

ಜತಿಯಂತೆ ಮತಿಯುಸಹಜಂ |
ಕ್ಷಿತಿಯೊಳ್ನಿಜಮೆಂಬಜನರ ವಾಡಿಕೆಯಂತೆ ||
ಜತೆಗೂಡಿತುಶಕ್ರನದಳ ||
ಖತಿಮತಿಯಿಂದೊಂದುಗೂಡಿತದನೇವೇಳ್ವೆಂ || ೫೧

ಹಿತಮಂಕೇಳ್ವುದುಮಾನ್ಯರ ।
ಮತಿಯಂತೋರಿಸುತಲಾತ್ಮದುನ್ನತಿಗೈವರ್ ॥
ಪತಿತರಕೇಳ್ದಡೆ ಕೋತಿಗೆ ।
ಹಿತದಿಂ ಪೂವಮಾಲೆಕೊಟ್ಟತೆರಮಂ ಮಾಳ್ಪರ್ ॥ ೫೨

ಪೋಗುವದನುಚಿತಮಲ್ಲಿಗೆ ।
ಪೋಗಲು ನಿಮಗೀಗ ಮಾನ್ಯಮಪ್ಪುದುನೈಜಂ ॥
ಬೇಗದಿಚರನಂ ಕಳಿಸುತ ।
ಸಾಗಿಸು ಲೇಖನದಿಕಾರ್ಯಮೆಂದುದು ಸಭೆತಾಂ ॥ ೫೩

## ( ವ ಚ ನ )

ಇಂದ್ರನಾಪ್ತರೀರೀತಿಪೇಳಲ್ಸುತ್ರಾಮಂ ಧೃತರಾಷ್ಟ್ರನೆಂಬಗಂಧರ್ವನಂ ಕರೆದು ತನ್ನಮುದ್ರೆಯನ್ನಾಂತಲೇಖನವನ್ನಿತ್ತುತಾನಿಂತಂದಂ ॥ ೫೪

## (ಕಂದಪದ್ಯ)

ಎಲೆಧೃತರಾಷ್ಟ್ರನೆಪೋಗೈ ।
ಮಲೆತಿರ್ಪಾನಂದಿಕಂಡು ಲೇಖನವಿತ್ತು ॥
ಮಲಹರನಿಹಸಭೆವರೆಗುಂ ।
ಛಲಮಂನೀಂ ತೊರೆದು ಬರ್ಪುದೆಂದುಚ್ಚರಿಸೈ ॥ ೫೫

ಬರುವನೊಬಾರದಲಿರುವನೊ ।
ತ್ವರಿತದಲಿದಕೇಳಿಮುಂದೆ ಬರದಿರ್ದೊಡೆನೀಂ ।
ಭರದಿಂ ಪೆಡೆಮುಡಿಗಟ್ಟುತ ।
ಸುರಸಭೆಗೆಳೆಯುತ್ತಲವನ ತರ್ಪುದುಬೇಗಂ ॥ ೫೬

## ( ಚಂಪಕಮಾಲಾವೃತ್ತ ).

ಸುರಪನುತಾನುಪೇಳೆ ಧೃತರಾಷ್ಟ್ರನು ತನ್ನಯ ಸೈನ್ಯಗೂಡುತಂ ।
ಭರದೊಳುನಂದಿ ತಾಣವನುಕಾಣಲುದೇವನ ಭಕ್ತಿಯಿಂದೆತಾಂ ॥

ಗಿರಿಯೊಳು ಘೋರಯೋಗದಲಿ ಮೌನವತಾಳ್ದಿಹನನ್ನುನೋಡಿಯಾ ||
ಸುರವನ ಲೇಖಚಲ್ಲಲದ ನೀಕ್ಷಿಸದಿರ್ದನು ನಂದಿದೇವನು || ೫೭

ಲಿಪಿಯನು ನೋಡದಿರ್ದಬಸವೇಶನನೀಕ್ಷಿಸಿ ಶಕ್ರಸೇವಕಂ |
ಕುಪಿತದೊಳೆಂದನಾಗ ಲೆಲೆಕ್ಷುಲ್ಲಕಜೀವಿಯೆ ನಿರ್ಜರೇಶನ ||
ಶಪಥವವೇಳ್ವೆಕೇಳುಬರದಿರ್ದಡೆ ನೀಂಫಣಿಯುಲ್ಲಿ ತಾಳ್ದಿಹ ||
ಲಿಪಿಯುದನಳ್ಕಿಸುತ್ತೆ ಬರಹೇಳಿದ ಪೇಳ್ವರು ಮಾತನೆಂದನು || ೫೮

[ಕಂದಪದ್ಯ]

ಸುರಪನ ಸೇವಕರೀಪರಿ |
ಜರೆದಾಡಲು ಕಂಡುವೃಷಭ ಬಹುಮೌನದಲಿ ||
ಪರಶಿವಧ್ಯಾನದೊಳಿರ್ದನು |
ಕರೆದರುಬಹುಬಿಂಕದಿಂದ ನಂದೀಶನನು || ೫೯

ಕಡುಮೂರ್ಖಕೇಳು ನಿನ್ನಂ |
ಪಿಡಿನುಡಿಯಂ ಕಟ್ಟಿಬೇಗ ಸುರಪನಮುಂದೆ ||
ಸಡಗರದಿಂದೊಯ್ಯುವೆವೈ ||
ನಡೆನೋಡೊಂದಾಡು ಮಾತ ನೆಂದರ್ದಿವಿಜರ್ || ೬೦

[ಮತ್ತೇಭವಿಕ್ರೀಡಿತವೃತ್ತ]

ಜರೆಯುಲ್ನಿರ್ಜರ ಸಂಘಮುಂಬಸವತಾಂ ನೋಡುತ್ತಹುಂಕಾರದಿಂ
ಭರದಿಂ ಶ್ವಾಸವಬಿಟ್ಟನಾಗ ದಿವಿಜರ್ದಿಕೆಟ್ಟುಪೋಲ್ವೋದರು
ಸುರರೋದ್ಭಾಮನಮುಂದೆ ಬಂದುನುಡಿಪಂ ತತ್ಸ್ಟ್ರೈನ್ಯಪಾಳಾದುದಂ !
ಚರರೋದ್ಭಾವನಃ ಪೈನ್ಯದಿಂಪಲರಿಯ್ಯೈಮುಂದಾದದುಷ್ಕಾರ್ಯಮಂ || ೬೧

[ವಚನ]

ಈಪರಿಯಿಂ ಬಸವೇಶಂ ಖತಿದೋರಲ್‌ಚರಂ ಬೆದರಿಬಂದರುಹಲಾ
ನಂ ಮರ್ಕಟಂಗೆ ಮಧುವನಿಟ್ಟಂತೆ ಬಹುರೋಷದಿಂ
ಕಿಡಿಕಿಡಿಯಾದಂ || ೬೨

[ಕಂದಪದ್ಯ]

ಘಡಘಡ ದುಷ್ಟಾಧಮನೇ ।
ಕಡುವಾಂಛಿತವೆನಿತು ನಿನ್ನಸನ್ನಿಧಿಗೆನ್ನಾ ॥
ಧೃಡಶೌರ್ಯದ ಚರಬರೆಸೀಂ ।
ನಡೆನೋಡಡೆ ನಿಂದೆಬಸವನಿನ್ನಂ ನೋಳ್ಪೆಂ ॥ ೬೩

ಕೋಪದೊಳಿಂದ್ರಂ ಕರೆಸಿದ ।
ಚಾಪಲವರ ವೀರರೆಲ್ಲಬರ್ಪುದುಬೇಗಂ ॥
ಪಾಪಿತನಂದಿಯನೆಳೆಯುವ ।
ಚಾಪಂಗಳನೆಲ್ಲ ಕೂಡಿಸೊರಡುವದೆಂದಂ ॥ ೬೪

ಪಿಡಿದಂ ವಜ್ರವಕರದಿಂ ।
ನುಡಿದಂ ಭಲಭಲರೆನಂದಿನೋಡೆನ್ನನುನೀಂ ।
ತಡೆವುತಕಡೆಗಾಲದ ಘನ ।
ಶಿಡಿಲಿಗೆ ತಲೆಯೊಡ್ಡಿದಂದವಾಯ್ತುದು ತಿಳಿನೀಂ ॥ ೬೫

—[ ವಚನ ]—

ಎಂದಾಸಂಕ್ರಂದನಂ ನಿಂದಲ್ಲಿ ನಿಲ್ಲದೆ ರೋಷದಿಂದವಡುಗಚ್ಚುತ್ತ ಹುಂಕಾರದಿಂ ಕಡೆಗಾಲರುದ್ರನಂದದಿಂ ಘುಡುಘುಡಿಸು ತೆಡಬಲವ ನಾರೈಯದಾದಂ ॥ ೬೬

[ಗದ್ಯ]

ಇದು ಶ್ರೀ ಮದ್ವೀರ ಶೈವಾಚ್ಯಾರಧು ರೀಣಶಾಂತವೀರ ದೇವರೊಡಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರ ಚಿ ತ ವಾ ದ ಬಸವಜನ್ಮ ಮಹಾಕಾವ್ಯದೊಳ್ದ್ವಿತೀಯಾಶ್ವಾಸಂ ಸಮಾಪ್ತಂ ಅಂತುಸಂಧಿ ಎರಡಕ್ಕಂಗದ್ಯಪದ್ಯಂಗಳೊಂದು ನೂರಾಅರುವತ್ತೇಳಕ್ಕಂ ಮಂಗಲಮಹಾ

# ★ ತೃತೀಯಾಶ್ವಾಸ ಪ್ರಾರಂಭ. ★

## [ಚಂಪಕಮಾಲಾವೃತ್ತ]

ನಗಸುತೆನಾಥನಾಗದನುಜಾರಿ ನಿರಾಮಯ ನೀಲಕಂಠನೀ ।
ಮಗಮದತಾಣಸೂರ್ಜಿತ ಪರಾಕ್ರಮನೇತ್ರಶಶೀಹುತಾಶನೈ ॥
ಮೊಗ ಸುಮನೋರತರ್ಗೆ ಭವತಾರಣಸೌಕಮನೋಜನಂಗಮಂ ॥
ಧಗಿಸಿದಶಂಭುಭಿನ್ನಹವ ಮಾಡುವೆನಾಂ ಪರಿಪಾಲಿಸೆನ್ನನು ॥ ೧

## [ಮತ್ತೇಭಕ್ರೀಡಿತವೃತ್ತ]

ವೃಕನಾಹಾರದವಾಹನಂಗೆಸಖನಂ ! ಮೆಲ್ಪಾತನಾರಾತಿಯಂ ॥
ಶಕಟಂಗೈದನ ಪ್ರೀಯಳಿಂಗೆ ಸದನಂತಾವಾಗಿತೋರಿರ್ಪಕೆ
ಸಖನಂಗೋದ್ಭವನಂಶಿರಂಗಡಿದನಣ್ಣಂಗೈಯತಾನಾದನಂ ।
ತಕನಂವ್ಯೋಮಸರಿತ್ಸುಧಾಂಶುಶಿಖನಂ ನಾಂಬಣ್ಣಿಪೆಂಸಂತತಂ ॥ ೨

## [ ವ ಚ ನ ]

ಮತ್ತಮಾಬಿಡೌಜಂ ॥ ೩

## [ಮತ್ತೇಭವಿಕ್ರೀಡಿತವೃತ್ತ]

ಕರೆವಂತಸ್ಮರಿ ಸೈನ್ಯಮಂ ಶಿಬಿರದಿಂ । ಕಹಳಾದಿವಾದ್ಯಂಗಳಂ ।
ಮೊರೆದಂ ಪೇಳದಭೀತಿಯಿಂ । ಶಿವಗೆತ್ರಿನೇತ್ರಂಘ ಸದ್ಭಾವದಿಯಿಂ ।
ಜರೆದಂ ಸಂಧಿಯುದ್ಧಾದಪಮಂ । ಘುರಕೆತ್ತಾಸ್ತಿಂದಾಗಿಬಂದಿರ್ಪರಂ ॥
ಪರಿದಂಮುಂದಕೆಸೈಣಾಪಂ । ಸದನಸನ್ಮ್ಯೋಹಾದಿಯಸ್ಸಿಂದ್ರನು ॥ ೪

[ಶಾರ್ದೂಲವಿಕ್ರೀಡಿತವೃತ್ತ]

ಕಾಲಂಬಂದನು ಕಾಲದಂಡಧರಿಸುತ್ತಾಕ್ರೋಶದಿಂದಾದಿಬ ।
ಕ್ಪಾಲಂಪೇಳಿದ ನುಜ್ಞೆಯಿಂ ಮಹಿಷಮನ್ನೇರುತ್ತಲಸ್ತ್ರಾದ್ರಿದಿ ॥
ಕ್ಪಾಲಂಬಂದನು ಪಾಶಬೀಸುತ ಕುಭೇರಂಬಂದಶಸ್ತ್ರಾಸ್ತ್ರಸ ।
ದ್ಪಾಲಂಕಾರದಿ ವಾಜಿಯೇರಿಭರದಿಂ ಶಾನಿಂದ್ರಸಾನಿಧ್ಯಕೆ ॥ ೫

[ಚಂಪಕಮಾಲಾವೃತ್ತ]

ಹುತವಹಬಂದಪೇರುರಿಯುಪೆರ್ಚಿಸಿ ಭೂಜನ ನಾಶಗೈದುಮಾ
ರುತವರಬಂದ ಪೆರ್ಗಿರಿಕುಜಂಗಳ ಮೇಲಕೆಪಾರಿಸುತ್ತನೈ ।
ರುತಿವರಬಂದ ಖಡ್ಗವನು ಝಳ್ಪಿಸುತಂ ಪೆಣರಾಶಿಗೈವಪೋಲ್ ।
ಖತಿಯೊಳುಬಂದನಾ ವೃಷಭವಾಹನ ನೆಣ್ದೆಶೆಕಂಪಿಪಂತೆತಾ ॥ ೬

(ಕಂದಪದ್ಯ)

ಕವಿಯುವ ಮಧುಕರ ನಂದದಿ ।
ಕವಿದರುತಾವ್ ಬಂದು ಬಂದುದಿಗುಪಾಲಕರುಂ ॥
ಕವಿಯಾವನು ಬಣ್ಣಿಪನೈ ॥
ಕವಿತೆಯೊಳುಂ ಬರೆಯಲಾರ್ಗೆಗೋಚರ ಮಹುದು ॥ ೭

ಪಡೆಯೊಳ್ಮೆರೆದವು ಬಹುತರ ।
ಕಿಡಿಯುಗುಳುವ ಶಸ್ತ್ರನಿಕರ ಕುಂತಳಗದೆಯು ।
ಪ್ಪುಡಪಾಶಭಲ್ಲಿ ಪಲಿಗೆಯು ।
ಪಿಡಿದಿಹವೀರರನು ಪೊತ್ತವಾಹನಮೆಲ್ಲಂ ॥ ೮
ಕತ್ತಲೆಗವಿಯಿತು ನೆರದಿಹ ।
ಸತ್ತಿಗೆಯಿಂ ದಿವಿಜರತ್ನಭೂಷಣರುಚಿಮಯ ॥
ದುತ್ತಮತೇಜದಿತಾನುರೆ ।
ಯುತ್ತರಿಸುವದೆಂಬತೆರದೆ ರಂಜಿಸಿತಾಗಳ್ ॥ ೯

ನಾದವುದಶ ದಿಕ್ಕುಗಳೊಳ್ ।
ನಾದವು ಕುಲಶರಧಿದೇಶವದ್ರಿಗಳೊಳ್ತಾ ।
ನಾದವುರವಿಶಶಿಗಳಲೀ ।
ನಾದವು ಸುತ್ರಾಮ ಸೈನ್ಯ ಭೇರಿಯುರವದಿಂ ॥ ೧೦

(ಮತ್ತೇಭವಿಕ್ರೀಡಿತವೃತ್ತ)

ಎನಿತಾಂಬಣ್ಣಿಪೆ ಸಗ್ಗದಾಣ್ಮದಳಮಂ । ಕಲ್ಪಾಂತದೊಳ್ತೋರ್ಪರು
ದ್ರನೊ ತಾಮೇರೆಯ ಮೀರಿಬಂದುದಧಿಯೋ । ಕಾಳ್ಮೇಘದೊಳ್ತೋರುವ ॥
ಘನಗಂಭೀರದಗರ್ಜನಂ ಶತಕದಿಂ ಕೂಡಿರ್ಪುದೋ ಕಾಣೆವೀ ।
ಸ್ವನಮೇಂ ಕಾರಣಮೆಂದು ನೋಳ್ಪರಿಗೆ ತಾನಾಶ್ಚರ್ಯಮಂ ಬೀರಿತು ॥ ೧೧
ಪಡೆಯೊಳ್ಪರ್ಪದಿಶೂರರಂ ಗರತುನಂ ಧೂಳಿಟ್ಟು ಮೇಲೆದ್ದುದೋ ।
ಪಡೆದಿರ್ಪಂಗದಶೋಣ ವಾಯುಭರದಿಂ ಪಾರಿರ್ಪುದೋವೇಗದಿಂ ।
ನಡೆದಿರ್ಪಾಪದಘಾತಿಯಂ ಶಿವಗೆದೂರಲ್ಬೂಮಿಪೋಯ್ತೆಂಬವೋಲ್ ।
ಸಿಡಿಲಂಕಾರುವ ಸೈನ್ಯದೇಳು ತರುಣಚ್ಛಾಯಭ್ರಮಂ ಮುಚ್ಚಿತು । ೧೨

[ಕಂದಪದ್ಯ]

ಕರಿತುರಗ ರಥ ಪದಾತಿಯ ।
ಸಿರಿಯನ್ನಭಿವರ್ಣಿಸುವಡೆ ತಾನಸದಳಕೇಳ್ ।
ಪರಿಪರಿಬೆಡಗಂ ತೋರುವ ।
ಧುರಶೌರ್ಯವ ತಾಳ್ದುದಾಗ ಶಕ್ರನಸೈನ್ಯಂ ॥ ೧೩
ತಾಳದಲೀ ಸೈನ್ಯದಕಾ ।
ಲಾಳಿನಹತಿಯಿಂದ ವಸುಧೆ ನಡುಗುವದೆಂದುಂ ।
ಮೇಲಾಗಿ ಹಕಟಕವತಾ ।
ವಾಲೋಕಿಸುತಿರ್ದಜನರು ಗಾಬರಿಗೊಂಡರ್ ॥ ೧೪

ಪುರಹರ ಸಭೆಯೊಳ್ನಿಂದಿಯು ।
ತ್ವರಿತದಿ ಮುನಿಸಾಂ ಶುಪೋದನೇತಕೆದೇವಾ ॥
ಕರೆಯಲ್ ಶಂಕರ ಪ್ರಳಯದ ।
ಸಿರಿಯಂ ನೆರೆತೋರ್ದನೆಂದು ಭೀತಿಯುಗೊಂಡರ್ ॥ ೧೫

ಚೀರಿತು ಬ್ರಹ್ಮಾಂಡಂಧುರ ।
ದೋರುವ ಸೈನ್ಯಕ್ಕೆ ಜೀವವಾಹುತಿಯೆಂದು ॥
ಕಾರಿತುಪುಳ್ಳರಜೀವಂ ।
ದಾರಿಯುಸಿಕ್ಕಂತೆ ದಿಕ್ಕುಪಾಲಾದರ್ತಾವ್ ॥ ೧೬

ಸತಿಸುತರ ತೊರೆಯುತಾತ್ಮದ ।
ಹಿತಮಂಸಾಧಿಸುತ ಲೋಡ್ವರೆಲ್ಲರ್ಜನತಾ ।
ವತಿಭೀಕರ ವೆನಿತುಂಟೊ
ಮತಿಯಿಂದಾಲಿಸುವದೆಂದ ಚೆನ್ನೇಶ್ವರನು ॥ ೧೭

[ಚಂಪಕಮಾಲಾವೃತ್ತ]

ಹರಿಘಟಿನಾಗಸಂಘ ವರಸ್ಯಂದನಮೇಣ್ ಶರಜ್ವಾಲ ಜ್ವಾಲಕಂ
ಮೆರೆಯುವ ಪುಂಡರೀಕಮಯ ಮಂಕುಶಕೋಶಶಿಲೀಮುಖಂವಸುಂ
ಧರೆಬಿರಿವಂಥ ಕಂಬುರವವಾಹನ ಸಂಗಮದ್ಧಾಗಿ ತೋರುತಂ
ಶರಧಿಪೊಲಾಂತುದಾಗ ಸುರನಾಥನ ಸೈನ್ಯಮದೇನು ಬಣ್ಣಿಪೆಂ ॥ ೧೮

[ ಕಂದಪದ್ಯ ]

ಕಮಲಂ ಕುಮುದಂ ಮಧುಪಗ
ಣಮಿತ ಸುಶೋಭಿತ ದಿಬರ್ಪವಾಹನದಿಂತಾಂ
ಸುಮನ ಸರಸಂಘಮೆಸೆದುದು
ರಮಣೀ ಯಕಮಾಗಿತೋರ್ಪ ಸಾರಸಮೆಂದು ॥ ೧೯

[ವಚನ]

ಇಂತಾಬಿಡೌಜ ಬಲಂ ಪಯಣಗೊಡುತುಲ್ಲಾಸದಿಂ ॥ ೨೦

(ಮತ್ತೇಭವಿಕ್ರೀಡಿತವೃತ್ತ)

ಕೆಲಬರ್ತಮ್ಮಯಪಾಶದಿಂ ಬಸವಸತ್ಪಾದಂಗಳಂ ಬಂಧಿಸಿ ।
ಕೆಲಬರ್ತಮ್ಮಕರಾಗ್ರದಿರ್ಪಗದೆಯಿಂದಗಾಸ್ತಿಯಂ ಛೇದಿಸಿ ।
ಕೆಲಬರ್ತಮ್ಮಸಿಯಿಂ ಮದಾಂಧತನುವತ್ವಕ್ಕೇಂದ್ರಿಯಂ ಚೂರ್ಣಿಸಿ ।
ಕೆಲಬರ್ತಮ್ಮಬಲಾಢ್ಯದಿಂ ತರುವೆವೆಂದಾಲೋಚನಂಗೈದರು ॥ ೨೧

[ಕಂದಪದ್ಯ]

ಈಪರಿ ಶೌರ್ಯೋನ್ನತೆಯಿಂ ।
ಚಾಪಲತರವೀರರೆಲ್ಲ ಪೈಣವತಾಳೀ ।
ಕೋಪಿತನಾಗಿಹವೃಷಭನ ।
ಕಾಪಿನಕಾನನಕೆ ಬೀಡುಗೊಂಡರ್ಬೇಗಂ ॥ ೨೨

(ವಚನ)

ಇಂತುರಂಜಿಪಸಂಕ್ರಂದನ ಕಟಕಂಮುದದಿಂ ಗಹಗಹಿಸುತಂ ವೀರತ್ವದಿಂ ಪಯಣದೊಳ್ಪಯಣಗೊಡುತಂ ಬರುತಿರ್ಪಸಮಯದೊಳಾವೃಷಭವಾಸಂ । ಪುಣ್ಯಕೋಶಂ । ಅಖಿಲದುರಿತನಾಶಂ । ಕಾನನಪ್ರದೇಶಂ ಕಂಡುದಾಗಳ್ ॥ ೨೩

(ಚಂಪಕಮಾಲಾವೃತ್ತ)

ಚಕಿತಮಿಧಾಯ್ತು ಮೂಷಕ ಸರೀಸೃಪ ಸಂಕುಲವ್ಯಾಘ್ರಸಂಘದಿಂ।
ನಕುಲಕುರಂಗವರ್ಗ ಹರಿದಾನಗಜಂಗಳ ಘೋರಶಬ್ದದಿಂ ॥
ವೃಕಶಶಕಂ ಬಿಡಾಲಶಿವ ಋಕ್ಷವರಾಹಗಜಾರ್ಭಟಂಗಳಿಂ ।
ದಖಿಲರಕಣ್ಗೆಕಾನಪಶುಸಂಚಯುದಾಗರದಂತೆ ತೋರಿತು ॥ ೨೪

[ಮತ್ತೇಭವಿಕ್ರೀಡಿತವೃತ್ತ]

ಪಗಲೋರಾತ್ರಿಯಕಾಲಪೋಸುಮುಖವೋ ಕೈಲಾಸನಾಗೇಂದ್ರನೋ
ಖಗದೇರಾಲಯದಬ್ಧಿಯೋ । ದಿವಿಜರಾವಾಸಸ್ಥಲಂತೋರ್ಪುದೋ ।

ಹಗೆಗಳ್ಕಾದುವಯುದ್ಧರಂಗಮದೆನಲ್ ಸೋಮಾರ್ಕಮೇಣ್ಪಾವಕಂ ।
ಮಿಗೆತಾಂತೋರ್ಪ ಶಿವಂಹರಿಶತಪಶಾಕ್ಷೀ ಖಡ್ಗದಿಂರಂಜಿಕುಂ ॥ ೨೫

(ಚಂಪಕಮಾಲಾವೃತ್ತ)

ಸುರಚಿರಪುಂಡರೀಕ ಸಮುದಾನ್ವಿತ ಮಾಗಿಯು ಸಾರಸಲ್ಲದು ।
ರ್ದರತರ ವಿದ್ರುಮಾಲತೆ ಸುರಂಜನಮಾಗಿ ಮಹಾಬ್ಧಿಯಲ್ಲಸುಂ ।
ದರಹರಿಜನ್ಮ ಭೂಮಿಯನಿಸಿರ್ದದು ಗೋಕುಲಮಲ್ಲಋಕ್ಷಸಂ ।
ಭರಿತಮದಾಗಿ ಯುಂಗಗನ ಮಲ್ಲೆನಿಸಿರ್ಪುದು ಘೋರಕಾನನಂ ॥ ೨೬

—: ವಚನ :—

ಇಂತುಮಹಾಕಾನನಂ ನಿಬಿಡವಟದ್ರುಮಂಗಳಿಂ ಗಗನಾಛ್ಛಾದಿತಮಾಗಿ ತಾನರುಣರಶ್ಮಿಯಂ ಬರಗೊಡದಿರಲ್ತಾಮಸಮನಾಂತು ಘನಗಂಭೀರಮಂ ಪೋಲ್ತು ಧಗಧಗಿಪಕಾಳಾಗ್ನಿಯಿಂ ಘನಮೃಗಸಂದಣಿಯಿಂ । ಶುಕಪಿಕಕಲಾಪಮಯದಿಂ ರಂಜಿಸಲ್ಸುತ್ರಾಮ ಸೈನಿಕರ್ಚಕಿತರಾಗಿ ॥ ೨೭

(ಮತ್ತೇಭವಿಕ್ರೀಡಿತವೃತ್ತ)

ಶಬರಂ ತಾನೆನಿಸುತ್ತ ಲೀಶನರನೊಳ್ಕಾದಾಡಿದಾ ಕಾನನಂ ।
ಪ್ರಭುತಾಂಮೋದಮಗೊಂಬು ಪೋಲುಮೆಯುತಾಯೋಗಾಂಗದಿಂಯಾಗಮಂ
ಸೊಬಗಿಂ ಮಾಡಿದಕಾನನಂ ದನುಜಮಲ್ಲಂ ತಾನುಶೂರತ್ವದಿಂ ।
ಶಿಬಿರಂ ಗೊಂಡಿಹ ಘೋರಕಾನಮಿದಕೇಂ ಪಾಡಂದರಾಶೂರರು ॥ ೨೮

(ಉತ್ಪಲಮಾಲಾವೃತ್ತ)

ಗಾಳಿಯವೇಗದಿಂ ದುಯಿಲಮಾಡುವ ಶಾಖೆಯುಚೂತಕುಂಜರ ॥
ಮ್ಮೇಳುತ ರಂಬೆರಂಬೆಗೆಸು ಹೇಷದಿಪಾರ,ಪಲಾಕವಾಜಿ.೦ ।
ಲೋಲದಿ ಜೊಡಿಯಿಂ ಪರಿದುಪಾರುವಚಕ್ರದಶೋಭೆಸ್ಯಂದನಂ ।
ಧೂಳಿಯುಪಾರುಪೋಲ್ಪ ರಿಪಕಾಳ್ಮಿಗಕಾಳ್ಬಲಮಾಯ್ತು ಕಾನದೊಳ್ ॥ ೨೯

(ಕಂದಪದ್ಯ)

ಇಂತಿಹಚತುರಂಗದವನ ।
ಕಂತುವಿನಾರಾತಿ ರೂಪ ನಂದಿಯುಮಾಯಾ ।
ತಂತ್ರದ ಸೈನ್ಯಮಿದೆನುತಂ ।
ಚಿಂತೆಯೊಳಂ ಭೀತಿಗೊಂಡಿತಿಂದ್ರನಕಟಕಂ ॥ ೩೦

[ವಚನ]

ಇಂತುರಂಜಿಪವನವನ್ನೀಕ್ಷಿಸಿ ಸುತ್ರಾಮುದಳಮತಿಭೀತಿಯಿಂ ಬೆದರಿರಲ್ ಚದುರನೊರ್ವನಂಬಂದು ರಣರಂಗದಧಿದೇವತೆಯೆನುತಂ ಕಾಡನುರಿತೋರಿಸುತ ವನಸುಂದರಿಯುಮುದಕುಂಜರ ಕುಂಭಯುಗ್ಮಂಗಳಂ ಪೊರವಾರಮೆನಿಸಿ ಪಟ್ಟಾದಕದಳೀವೃಮ ಧಡಂಗಳೇ ವನಲಕ್ಷ್ಮಿ ಬಲ್ತೊಡೆಗಳೆಂದು ಎಳಿದಳಿರ್ಗಳೇ ಪದಪಲ್ಲವಂಗಳೆಂದು ಚುಬುಕಂಗಳಂ ನಖಂಗಳೆಂದು ವನದೊಳ್ಸಲಿಪ ವೃಗಾಘಪಸಂ ವನಾಂಗನೆಯ ಮಧ್ಯವೆಂದುರೆತೋರ್ಪ ತದ್ವನದೊಳಿರ್ಪ ಭೂಭುಪ್ರದೇಶೆಯುಂ ತ್ರಿವಳಿಗಳೆಂದು ದರಿಕಿರಿಗಿರಿಗಳಂ ಕುಚಮುನರಿದೆನಿಸಿ । ಕಿಗ್ಗಟ್ಟಿನೊಳಿರ್ಪ ಕಂದಕವನು ದ್ವಂದ್ವ ಕುಚದಿರುಬೆಂದು ಪೊಳೆವದಾಳಿಂಬಮುಂ ದಶನಮೆಂದು ತೊಂಡೆವಣ್ಣುಟಿಯೆಂದು ಮೆರೆವಚಂಪಕಮುಂ ಘ್ರಾಣವೆಂದು ಹರಿಣಿ ಮರಿಗಳನೇ ನೇತ್ರಮೆಂದು ವನಮುಕರಂದವಾರಿಯೊಳು ಶತಪತ್ರ ಮಿತ್ರಕಿರಣಮಾಂತು ಪ್ರಜ್ವಲಿಪಿಂದ್ರಧನುಷ್ಯಮುಂ ಭ್ರೂಶೋಭೆಯೆಂದು ಪಾರಾಡುವಳಿಗಳಂ ನೀಲಾಳಕಾಳಿಗಳೆಂದು ನೀಳ್ದ ಕಾಳೋರುಗನನು ರುಜಡಿಯೆಂದು ಮಹದ್ವಟ ಶಾಖೆಗಳನೇ ವರಬಾಹುಮೂಲನೆಂದು ಕೋಗಿಲೆಯ ನಿಡುಸರಮುನೇಧ್ವನಿಯೆಂದ ಸೊಬಗಿನಿಂ ಮೆರೆವಲಾವಣ್ಯ ಮಂತಾರುಣ್ಯವೆಂದಾಛ್ಛಾದಿತ ಪಚ್ಚಾರುಣ ಚಿತ್ರಪತ್ರಂಗಳಂ ದುಕೂಲವೆಂದು ನಾರೀಪ್ರತಿಮೆಯುಂ ಸರಿಪೋಲಿಸುತಂಜದ ಪೊಲ್ಸಹಚರರಿಗಂ ಪುರಿದುಂಬಿಸುತಂ । ಕಾಳಗಕಣುವಾಡುತಿರಲಾತಾಣ
ಕಿಂದ್ರಾಂಬಂದಂ । ೩೧

(ಕಂದಪದ್ಯ)

ಎಲೆವೀರರೆ ಬಿಡಿನೀವೀ ।
ಗಲಿಬಿಲಿಯಂ ಬಂದಕಾರ್ಯ ಮೇನಿದುನೋಡಿ ॥
ಛಲದಿಂ ಬಸವನ ಬಿಂಕವ ।
ಗೆಲಿವೆವ್ಮ್ರಯಸದನಕೊಯ್ವ ಹಂಬಲಮಾಡಿ ॥ ೩೨

ನಂದಿಯು ಚಂದದಿಬರುವನೊ ।
ಮುಂದರಿದೆಳದಟ್ಟಿ ಪೊಯ್ದು ತಳ್ಳಲ್ಬಹನೋ ।
ಮುಂದಿದ ರೊಳೊರ್ವಪೋಗೀ ।
ಯಂದವ ನರಿದೀಗನೀವು ಬರ್ಪುದುಬೇಗಂ ॥ ೩೩

ರವಿತನುಜಾತನ ವಾಕ್ಯದ ।
ಹವಣಿಕೆಯನ್ನರಿತು ಚಿತ್ರಶೇನಂಪೇಳ್ದಂ ।
ಸವಿಮಾತಿನಿಂದ ನಂದಿಯು ।
ಜವದಿಂ ಬರನೆಂದು ನೊದಲೆಗೋಚರಮಲ್ತೆ । ೩೪

ಕಟ್ಟುತ ಖಳಚರಣಗಳಂ ।
ನಿಟ್ಟೆಲುವಂ ಮುರಿಯುವಂತೆ ಪೊಯ್ದರೆ ಬಸವಂ ।
ಥಟ್ಟನೆಬಹನಲ್ಲದೆಮನ ।
ದಿಟ್ಟಹಛಲ ಮರೆಯಲಾರನೆಂದಂ ಸಚಿವಂ ! ೩೫

[ವಚನ]

ಇಂತಾಚಿತ್ರಶೇನನವಾಕ್ಯವ ನಾಕರ್ಣಿಸಿ ಸುತ್ರಾಮಂ ಧೃತರಾಷ್ಟ್ರನ ವಮಾನಮಂ ನೆನೆದು ಪೆರತುಪಾಯ ಕಾಣದೆ ನಂದೀಶನಂ ನೋಡಿಬಿಂಕ ದಿಂದಿಂತೆಂದಂ ೩೬

[ ಕಂದಪದ್ಯ ]

ಎಲೆಬಸವನಿನ್ನ ಬಿಂಕವ ।
ಗೆಲಿವಡೆ ಸುರಸೈನ್ಯಮಿನಿತು ಸಾಹಸಮೇಕೈ ।

ಬಲವಮಂ ಕೆಣಕದೆಬಾನೀಂ ।
ಛಲವಮಂ ಬಿಡುಫಲಮದಿಲ್ಲ ಕಾಳಗದಿಂದಂ । ೩೭
ತೆತ್ತೀಸಕೋಟಿ ಗಣನುಡಿ ।
ಯೆತ್ತಿನೊಳಕಟಕಟಕಾದ್ಪದನುಚಿತವೆಂದುಂ ।
ಚಿತ್ತದೊಳಾಸಿಸಿ ಪೇಳ್ದಿಂ ।
ಚಿತ್ತಜಹರನಲ್ಲಿ ಗೀಗಬರ್ಪುದದುಚಿತಂ । ೩೮
ಈಶನ ಸಭೆಯೊಳ್ನೀನಾ ।
ಘಾಸಿಯ ಗೈಯದಲೆ ವಿನಯದಿಂದಿರ್ದರೆತಾ।
ವಾಸವನಿನ್ನೀ ರೋಮದ್ಧ ।
ನಾಶವನಿನಿತೇಕೆ ಗೈಯುತಿರ್ದನೊಮೂಢಾ ।

## —[ ವಚನ ]—

ಇಂತಾಸುರನಾಥಂ ಪರಿಪರಿಯಾಗಿಭಂಗಿಸಿ ಹಾಸ್ಯದಿಂ ಮಾತಾಡು ತಿರಲಾ ನಂದೀಶಂ ಮಾರುತ್ತರಂಗೊಡದೆ ಶಿವಧ್ಯಾನದಿಂದಿರ್ದಂ ॥ ೪೦

(ಕಂದಪದ್ಯ)

ಸುರಪಂ ಕೋಪದಿನುಡಿದಂ ।
ವರಮುದದಿಂ ಕೂಡಿನಂದಿಮಾತಾಡನುತಾ ।
ನರರೇಸ್ಸೈನಿಕರೆಲ್ಲರು ।
ಭರದಿಂ ನಂದಿಯನು ಸೆಳೆದುಕಟ್ಟುವುದೆಂದಂ । ೪೧
ಈ ನುಡಿಗೇಳುತ ದಿವಿಜರು
ಮಾನಿತವೃಷಭನನು ಪಿಡಿದುಕಟ್ಟಲುಜಯಸಂ ।
ಧ್ವಾನದಿ ಪೋಗಲು ಶ್ರೀಹರ
ಧ್ಯಾನವಮಾಡುತ್ತಲಿರ್ದ ನಾಶಿವರೂಪಂ ।೪೨
ಸುತ್ತಲು ಮುಸುಕಿತುದಳಮಹ ।
ಕತ್ತಲಿಕವಿದಂತೆಕವಿದು ನಂದಿಯಪದವ ।

ನ್ನೆತ್ತಲು ಮಿಸುಗದ ತೆರದಿಂ ।
ದುತ್ತಮ ಪಾಶದೊಳು ಕಟ್ಟಿರೆಂದರ್ದಿವಿಜರ್ ॥ ೬೩

ತಮತಮಗೆ ಚತುರನುಡಿಯಿಂ ।
ಸುಮನ ಸಂಸ್ಸೈನ್ಯಮುತ್ತಿ ತಾಕ್ಷಣಬಲದೊಳ್
ವಿಮಲಮತಿ ನಂದಿವೇವನ ।
ಕಮಲಾಪ್ತನ ಕವಿವಕೀಟದಂದದಿಭ್ರುಮೆಯಿಂ ॥ ೬೪

ಇಂತಹ ರೀತಿಯಸ್ಸೈನ್ಯವ ।
ನೆಂತೆಂದಾಂ ನುಡಿವೆ ರಾಮನಂದಿಯತೇಜಂ ।
ಮಂತ್ರಮಯಂಗರಿದಲ್ಲದೆ ।
ಭ್ರಾಂತಿಯೊಳಂದೆತ್ತಲಿಕ್ಕೆ ಪೋದುದುಚಿತ್ರಂ ॥ ೬೫

(ಉತ್ಪಲಮಾಲಾವೃತ್ತ)

ನಂದಿಯಪಾಶದಿಂ ತುಡುಕಿ ಬಂಧಿಸವೇಳ್ಕುವುದೆಂದುಸೈನಿಕಂ ।
ಮಂದೆಳೆವಟ್ಟಿಹಾಸದೊಳು ಪಾದದೆ ಕೆಲವರು ವಾಲದೊಳ್ಕೆಲರ್
ಸಂದಶಿರಾಗ್ರದೊಳ್ಕೆಲರು ದೇಹದೆಕೆಲಬರು ಕಂಠನಾಳದೊಳ್ ।
ಬಂಧನಮಾಡಿ ತಮ್ಮೊಳಿಹ ಸತ್ವದೊಳೆತ್ತಲು ಸಿದ್ಧಮಾಯಿತು ॥ ೬೬

## — ವಚನ —

ಇಂತಾನಂದಿಯಂ ಪಾಶದಿಂತುಡುಕಿ ಪೊರಲನು ವಾದಕಟಕವನ್ನೀಕ್ಷಿಸುತ್ತಾ ಶಿವರೂಪಂ ಮಹಾಕೋಪಾರುಣನೇತ್ರ ನಲ್ಲದತಿ ಸಾಹಸಯುಕ್ತನಾಗಿಮನದೊಳಿಂತೆಂದಂ ॥ ೬೭

(ಕಂದಪದ್ಯ)

ಸುರನಾಥನದುರ್ವರ್ತನ ।
ಪರಿಭವಪಡೆದಿಂಥ ಘೋರವಿಪಿನಾಂತರದೊಳ್ ।

ಪುರಹರಧ್ಯಾನ ದೊಳಿದ್ದರಿ ।
ಹರಹರವುತ್ತಿನಗೆವಿಧಿಯು ತಪ್ಪದೆಹೋಯ್ತೀ ॥ ೪೮
ಕರೆಯುತ ಶಕ್ರನವಿನಯದೊ ।
ಳರಿಕೆಯು ಮಾಡುತ್ತ ಮನದ ತಾಪವನಳಿವಾ ।
ವರಿಯುಂ ಮಾಡುವೆನೆಂದಾ ।
ಗಿರಿವೈರಿಯೊಳೀತು ನುಡಿದ ನಂದೀಶಂತಾಂ । ೪೯

[ಚಂಪಕಮಾಲಾವೃತ್ತ]

ಎಲೆಎಲೆ ಬೇಡಬೇಡ ಸುರನಾಥನೆ ನಮ್ಮೊಳುಮಾಳ್ಪಕರ್ಕಶಂ ।
ಛಲದೊಳುಬಂಧನಾದಿ ಗ್ರಹಕಂಗಳಗೈದರೆ ನಿನ್ನಕೀರ್ತಿತಾಂ ।
ಸಲೆಬರಲಾರದಿನ್ನು ಬಿಡುಪೋಪುದು ಬೇಗನೆ ನಿನ್ನ ಸಾಸಮುಂ ।
ಮಲೆತಿಹವೀರರಲ್ಲಿ ನೆರೆಮೋರ್ಪುದು ನಾನಿದಕೀಡೆಯೊರ್ವನು ॥ ೫೦

(ಕಂದಪದ್ಯ)

ಸುರವರನಿನ್ನಯಸಿರಿಯಂ ।
ಪರಿಪರಿಸೌಭಾಗ್ಯಧರಿಸಿದಾಯುಧಮುಂಮೇ ।
ಣ್ಣಿರುತದಿ ಸೇವಿಪಮಧುವಿನ ।
ಪರಿಯಂ ನಾನೋಡದಿತ್ತೆ ನಿನಗನುತಾಪಂ । ೫೧
ಕೇಳೈಶಕ್ರನೆ ಶಯನದೆ ।
ಬಾಳಾಕ್ಷನ ಸಭೆಯೊಳಾನು ವಾಲಿವನಿತ್ತೀಂ
ತಾಳ್ವುದು ಮಹಿಮರುಕೋಪವ ।
ವಾಲದ ರೋಮವನು ನೀನುಕೀಳ್ದಿಹುದೇಕೈ । ೫೨

[ಚಂಪಕಮಾಲಾವೃತ್ತ]

ಮುದದಿಂದಿನ್ನ ಸುರೇಶ ಮುಂಚಿಗುಟಿನೀ। ತದ್ವಾಸಮಾಗಿರ್ಪಲಿಂ
ಗದನಾಶತ್ವವ ಗೈದೆಶಕ್ರಯಿವಕೇಂ ಬಂತೇನೊನಿನ್ನೈಸಿರಿ ।

ಮದನಾರಾತಿಯೊಳಿತ್ತ ಸದ್ವಚನಮಂ ನವ್ಯತ್ವದಿಂಪೋಗಿನಾಂ ॥
ಮುದದಿಂನಂದಿಯು ಕಾಣ್ಬೆನೆಂದು ದಳವೇಂ ಸಂಕಲ್ಪದಿಂತಂದೆಯೊ । ೫೩
ಸುರಕಾಂತಾಬಿಡುನೀ ಬಿಡೌಜರೊಳು ವಿಖ್ಯಾತಂಮಹಾಭಾಗ್ಯನೈ ।
ವರದೈರಾವತ ಕಾಮಧೇನು ಮರುಜಾರತ್ನಾದಿಸಂರಕ್ಷಕಂ ।
ಕರದೊಳ್ವಜ್ರವ ತಾಳ್ದು ದಿಕ್ಪತಿಗಳಿಂ ಮೇಲಾಗಿಬಾಳಿರ್ಪೆಯೈ ।
ಹರದೈತ್ಯಾಂತಕರರೆಲ್ಲ ನಿನ್ನ ಭಜಕರ್ನಾ ಸೋತೆಪೋಗೆಂದನು ॥೫೪

## (ಕಂದಪದ್ಯ)

ವಿನಯದ ನುಡಿಯಂ ಕೇಳುತ ।
ಲನಿಮಿಷಧವನಾಗ ನಂದಿಬೆದರಿದನೆಂದುಂ ।
ಮನತೋಷದೆ ಪೊರಲಪ್ಪಣೆ
ಯನುಕೊಟ್ಟಂ ತನ್ನಸೈನ್ಯಕೆಲ್ಲಕೆ ಬೇಗಂ । ೫೫
ಹೀನಗೆ ಹಿತವಂ ನುಡಿವವ ।
ಹಾನಿಯ ಪೊಂದದಲೆ ಮಾಣ್ಬನೇವೃಷ್ಟಿಯುಲಿಂ।
ಕಾನನ ದೊಳ್ಬಳಲುವಪಿರಿ ।
ವಾನರಕಂ ಬುದ್ಧಿಪೇಳ್ದ ಶುಕಸಂತತಿವೋಲ್ ॥ ೫೬
ಬೆಂಕಿಯುಕುಂಡದೆ ವೃಶ್ಚಿಕ
ಸಂಕಟ ಬಡುತಿರಲು ಕರುಣಿಹಸ್ತದೊಳದತಾಂ ।
ಭೋಂಕನೆ ತೆಗೆಯಲು ಕಚ್ಚುತ ।
ಸಂಕಟಕೊಟ್ಟಂತೆ ಶಕ್ರನಿತ್ತಂ ತಾಪಂ ॥ ೫೭

## [ ವ ಚ ನ ]

ಆಗಲಾಸುರಪಂ ನಂದಿತಾಂ ಸುರಸೈನ್ಯದಿರುಬಿಗೆ ಬೆದರ್ದನೆಂದು ಗ್ರಹಿಸಿ ತತ್ಸೈನ್ಯಕೆ ಪೊರಲಪ್ಪಣೆಯಂ ಕೊಡಲವರ್ವಿಕ್ರಮ ದೊಳಾರ್ಭಟಿಸು ತಲೆತ್ತಲಾಬಸವಂ ಹಿತವಚನಮಂ ಬಿಟ್ಟು ತನ್ನಂಗವಂ ಕೊಡಹಲಾಬಿಗಿ

ದಬಂಧಂವರಿದುದು । ೫೮

## [ಮತ್ತೇಭವಿಕ್ರೀಡಿತವೃತ್ತ]

ಬಸವಂತನ್ನಯ ಕೋಪದಿಂತಸುವ ತಾನಲ್ಲಾಡಿಸಲ್ಘಾಸಿಗೆ ।
ಕುಸಿದುಂ ಭೂಮಿಯು ಕೂರ್ಮಜೆನ್ನನುಡುಗಲ್ನಂದೀಶನು ಚ್ಛಾಸವು ।
ಬಿಸಿಲಂ ತಾತನೆಕಾರುತಿರ್ದುದರರೇ ಚತುರ್ಥವಾರಾಸಿಗು
ಬ್ಬಸದಿಂ ಪೋದುದುಶಕ್ರ ಸೈನ್ಯಚರಣಂ ವಾಲಾಂಗಮಂಜ್ಯಾರುತ ॥ ೫೯
ಕೆಲಬರ್ತಮ್ಮಯ ಜೀವವನ್ನುಳಿಸಿಕೊಂಡೋಡುತ್ತ ದಿಕ್ಕಾಣದೆ
ಕೆಲಬರ್ಗಾಳಿಯೊಳಿಟ್ಟಪರ್ಣದವೊಲುಂ ಪಾರುತ್ತಲಾಕಾಶದೊಳ್
ಕೆಲಬರ್ಪಾದದೆಶಿಲ್ಕಿ ಪ್ರಾಣ ಗತದಿಂದೋರುತ್ತಲಿರ್ದರ್ಸದಾ
ಕೆಲಬರ್ಘಾಸಿಯ ಹೊಂದುತಿಂದ್ರನನುತಾವ್ ಹೀಯಾಳಿಸುತಿರ್ದರು ॥ ೬೦

## [ವಚನ]

ಇಂತಾ ನಂದೀಶನು ರುಂಬಿಗೆ ಬಲಂಕಂಗೆಟ್ಟು ದಿಕ್ಪಲಾಯನಂಗೊಳ್ಳ ಲಾಸಮಯದೊಳ್ಕದಂಗಿಶಕ್ರಂ ತನ್ನಿರವಂಜರೆಯುತಂ ಕರದೊಳ್ ಶಸ್ತ್ರಮಂ ಕೊಂಡು ಕಾಳಗಕೆತಾನನುವಾದಂ ॥ ೬೧

## [ಗದ್ಯ]

ಇದು ಶ್ರೀ ಮದ್ವೀರ ಶೈವಾಚ್ಯಾರಧು ರೀಣಶಾಂತವೀರ ದೇವರೊಡಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾಕಾವ್ಯದೊಳ್ತ್ರತೀಯಾಶ್ವಾಸಂ ಸಮಾಪ್ತಂ ಅಂತೂ ಸಂಧಿ ಮೂರಕ್ಕಂ ಗದ್ಯಪದ್ಯಗಳು ಎರಡನೂರಾಇಪ್ಪತ್ತೆಂಟಕ್ಕಂ ಮಂಗಲಮಹಾ

# ◆ ಚತುರ್ಥಾಶ್ವಾಸ ಪ್ರಾರಂಭ. ◆

[ಚಂಪಕಮಾಲಾವೃತ್ತ]

ಸಮಕೋಲಭೂಷ । ಸಾಮಜವಿನಾಶ । ಶಿವಾಧವ ಶೀರ್ಷಚಂದ್ರವು ।
ಸುಮಶರನಾಶ । ಸೂರ್ಯದೃಗ । ಸೇನೆಕರೀಪಿತ । ಶೈಲವಾಸಿತ ।
ಸುಮನಜವಂದ್ಯ । ಸೋಮಕಳೀಭೂಷಿತ । ಸೌರಭೆಯಾಂಕ । ಸಂಕಟ
ಶಮನಮಹೇಶರಕ್ಷಿಪುದು ಸತ್ಪರಿವಾರಗಣಾಧಿನಾಯಕ ॥ ೧
ಕರಿಮುಖತಾತ । ಕಾಲಹರ । ಕಿನ್ನರವಂದಿತ । ಕೀಶಕಾಂಬರ ।
ಕುರಗಸುಹಸ್ತ । ಕೂರ್ಮಹತ । ಕೇಶವನಕ್ಷಿಪದಾಬ್ಜ ಕೈಟಭಾ ।
ವರಸಖ । ಕೋಶಪಾಲ । ದೃಗಕೌಂಶಿಕವೈರಿಯ ಕಂಬುವ್ಯಾಲಕಃ
ಪೊರೆವುದು ಮಂಗಳಾಂಗನುಹಿಮಾನತಸಂಗಮಹಾಂಬುಶೇಖರಾ ॥೨॥

## (ವಚನ)

ಇಂತಾನಿರ್ಜರೇಂದ್ರಂ ಪಲಾಯನಗೊಂಡಬಲವಂ ಲೆಕ್ಕಿಸದಿರಲವ
ನಮಾತ್ಯಂ । ೩

## (ಕಂದಪದ್ಯ)

ಈಪರಿಭಂಗವ ಕಾಣುತ
ಚಾಪಲಕರ ಶಸ್ತ್ರದಿಂದಲಿಂದ್ರನ ಸಚಿವಂ ।
ಕೋಪದಿ ಬಾಣವನೆಸೆಯುತ ।
ಮೂಪುರಹರಭಕ್ತನಂ ಮುಸುಂಕಿದನಾಗಳ್ ॥ ೪

ಒಂದೆಡೆಯೊಳ್ಮಂತ್ರಿಯಶರ ।
ಪೊಂದೆಡೆಯೊಳಗಿಂದ್ರಜಾತ ನೆಸೆಯುವಬಾಣಂ ।
ಒಂದೆಡೆ ಶಕ್ರನ ಪರುಳುಗ ।
ಳೊಂದೆರಡಲ್ಲದಲೆ ಮೀರೆದಪ್ಪಿದವಾಗಳ್ । ೫

( ಚಂಪಕಮಾಲಾವೃತ್ತ )

ಸುರವರ ನೆಚ್ಚಬಾಣ ತನುಸಂಭವ ನೆಚ್ಚಶರಂ ಸುಮಂತ್ರಿತಾ
ಭರದಲಿ ಪೊಯ್ವಪುಂಖಮಿನಿತೆಲ್ಲವು ಕೂಡುತಸೂರ್ಯಚಂದ್ರರಾ ।
ಕುರುಹನುಮಾಜಿ ಕತ್ತಲೆಯ ಬೀರಲು ಸೈನ್ಯದೊಳಶ್ವನಾಗಗಳ್ ।
ಖುರಶರ ಘಂಟೆಯಿಂದೊಗೆದ ನಾದಮುದಲ್ಲದೆಕಾಣರೊಬ್ಬರು ॥ ೬

(ಕಂದಪದ್ಯ)

ಇಂತಹ ಕರ್ಕಶಬಾಣವ ।
ತಾಂತಳೆಯುತ ಖಾತಿಗೊಂಡು ಬಿಡೆದಿಕ್ಪಾಲರ್
ಸಂತಸದಿಂ ವೃಷಭಂತಾಂ ।
ನಿಂತಂಕಂತುವಿನ ವೈರಿಯಂ ಚಿಂತಿಸುತಂ । ೭

(ಉತ್ಪಲಮಾಲಾವೃತ್ತ)

ಕಾದಲುಕೈದು ಗಾಣೆನೆನು ತಳ್ಕಿದನೇ । ಮನದೊಳ್ಬೆದರ್ದನೇ ।
ಮೇದಿನಿಮೀರಿಬರ್ಪಶರಸಂ ದಣಿನೋಡುತಲಳ್ಕಿದೇಹದೊಳ್
ಬಾಧೆಯನಾಳ್ದನೇ । ಶಿವನಧ್ಯಾನದೆ ಮುಕ್ತತೆಯಾಂತನೇನವಂ ।
ಸಾದರದಿಂದ ತೋರ್ದ ಸುರಪಂ ಗತಿದೈನ್ಯವ ನಂದಿದೇವನು ॥ ೮
ಪ್ರೇಮದವಾಕ್ಯದಿಂ ಬಸವತಾನತಿದೈನ್ಯದಿ ಪೇಳ್ದುದಂಸುರೋ
ದ್ದಾಮನು ಕೇಳದಂತೆ ಪಶುವೆಂದೆಣಸುತ್ತಲಿ ಶಸ್ತ್ರಧಾರೆಯಂ ।
ನೇಮದೆ ತನ್ನ ಸೈನ್ಯದೊಳು ಕೋಪದೆ ಸರ್ವರು ತೋರಿರೆನ್ನಲಾ ।
ಸ್ವಾಮಿಯ ಕಾರ್ಯಕಾಗಿದಿಗು ಪಾಲರುತೊಟ್ಟೆರು ತಮ್ಮಬಾಣಮಂ ।

[ಚಂಪಕಮಾಲಾವೃತ್ತ]

ಎಸೆಯುವ ಬಾಣಮಂ ಪಿಡಿದು ನುಂಗುವಪಾಳಯ ಪೊಕ್ಕುಶೃಂಗದಿಂ
ದಸಿಪೊಲುಛೇದಮಾಳ್ಪವರ ಪಾದದೆತಿಕ್ಕುತ ಸೈನ್ಯವೆಲ್ಲಮಂ ।
ಕಸಿವಿಸಿಮಾಡಿ ಭಂಗಗೊಳಿಸುತ್ತಲಕಾಲದಶರ್ವ ನಂದಮಂ ।
ಪುಸಿಯದೆ ಪೋಲ್ದನಾಬಸವ ಸುತ್ತಲು ಕೋಪದೆ ಕಾರಿಕೆಂಡಮಂ । ೧೨
ಪೊಡೆಯಲು ಬೇಸರಿಲ್ಲ ವರಸೈನ್ಯಕೆ ಬೇಗದೆ ಬಂದ ಬಾಣವ ।
ನ್ನೊಡಲೊಳು ಕೊಳ್ಳಲಿಕ್ಕೆ ತಿಲಮಾಲಸಗೊಳ್ಳನು ನಂದಿ ದೇವನು
ಕಡುಗಲಿ ವೀರರಸ್ತ್ರ ಪುಡಿಯಾದಪು ಶೃಂಗದ ಘೋರಘಾತದಿಂ ।
ಸಿಡಿಮಿಡಿಗೊಂಡು ಸರ್ವಜಳ ವೋಡಿತು ಜೀವದ ಕಾಂಕ್ಷೆಯಿಂದಲಿ ॥ ೧೩

(ಕಂದಪದ್ಯ)

ಈಪರಿ ಸೈನ್ಯದೊಳಪಜಯ
ವ್ಯಾಪಿಸಿ ಮೆರೆಯುತ್ತನಂದಿ ವಿಕ್ರಮತೋರಲ್
ಕೋಪದೊಳಿಂದ್ರಂಜರೆದಂ
ಭಾಪುರೆ ದಿವಿಜರ್ಕಳೆಂದು ಕೇಳಲೆ ರಾಮಾ ॥೧೪
ಓಡುವದನುಚಿತವೀರರೆ ।
ಮೂಢರೊಳೀ ಮೂಢನಂದಿಯುವನಂ ಶರದಿಂ ।
ತಾಡನ ಮಾಡಿರಿ ಭರದಿಂ ।
ದೋಡುವದಾಗಿ ವನಗರ್ವ ವಶವೆಮಗಹನು ॥ ೧೫
ಬಂದುದು ಮಹದಾರ್ಣವ ಮೆಂ ।
ಬಂದವ ತೋರುತ್ತ ಮತ್ತೆಯಃ ನಿಮಿಷ ಕಟಕಂ ।
ಚಂದದೆ ಖಡ್ಗವ ಪಿಡಿಯುತ ।
ಮುಂದರಿದೆಳೆಯುತ್ತ ಚುಚ್ಚಿದರ್ದೇಹದೊಳು ॥ ೧೬

(ಉತ್ಪಲಮಾಲಾವೃತ್ತ)

ನಂದಿಯ ದೇಹದಲ್ಲಿ ಮಹದದ್ರಿಚಯಂ ನೆರೆವಾಸ ಮಾಯ್ತೊದೇ ।
ವೇಂದ್ರನ ವಜ್ರದಂಡವನು ಭಕ್ಷಿಸಲಂದದು ಕಾಯದುಂಬಿತೊ

ಚಂದ್ರವಿಭೂಷಕ ಸ್ಮರಣದಿಂದದು ಕರ್ಕಶ ಮಾಯ್ತೊಪೇಳಲೇ ||
ನೆಂದುದ ಕಾಣೆ ಖಡ್ಗಮುರಿದುಂಬರಿದಾದವು ಶೂರಹಸ್ತಗಳ್ ||೧೭

ಕೋಪದೆ ಶೂರರೆಲ್ಲ ಬರಿಗೈಯಲಿ ಸಾಹಸದೋರಲಾಕ್ಷಣಂ |
ದೀಪದ ಮೇಲೆ ಪಾರಿಹತಮಪ್ಪ ಪತಂಗವೊಪೂತಚಂಪಕಾ
ರೂಪಕೆ ಮೋಹಮಾಂತೆರಗುತಿರ್ಪಳಿ ಸಂಘಮೊಕಾಣದೆಂಬವೋಲ್
ಕೋಪಿತ ನಂದಿದೇಹವನು ಮುಟ್ಟುತ ಬೀಳ್ವರ ಸಂಖ್ಯನಿರ್ಜರರ್ ||೧೮

[ಚಂಪಕಮಾಲಾವೃತ್ತ]

ಪೊಡವಿಯ ರೂಪದಂತೆ ನವಖಂಡಮಯಂ | ಜಲಗರ್ಭದಂದದಿಂ |
ದಿಡಿದಿಹಜೀವ ಭಂಗಮಯ ಶಂಭುವೊಲೋದರ ಭೂತಸನ್ಮಯಂ |
ಧೃಡಕನಕಾದ್ರಿಯಂತೆ ಸಿವವಾಸಮಯಂ ತಪಗೈವ ಯೋಗಿವೋಲ್ ||
ಕಡುತರದಿಂ ವಿರಕ್ತಮಯವಾಗಿ ರಣಾಟವಿ ತೋರುತಿರ್ಪುದೈ ||೧೯
ಕರಿಕರದಿಂ ಕರಂ ಕಹಳೆಯೂದುತ ಕುಂಜರದಂತಗಳ್ಗೆ ಸುಂ |
ದರ ಶಿರಗಟ್ಟಿ ಜಂತ್ರವಿಡಿದ ಶ್ವಖುರಂಗಳ ತಾಳವಿಕ್ಕುತಂ |
ವರರುಚಿ ಭೋಜನಂಗೊಳುತೆ ಮಿತ್ರರಕೂಡಿಸಿ ಭೂತ ಸಂಘತಾ |
ಪರಿಪರಿಯಂದದೊಳ್ಕವಿದು ಶೋಭನ ಕರ್ಮವತೀರ್ಚುತಿರ್ದವೈ ೨೦

(ಕಂದಪದ್ಯ)

ಸುರಪತಿ ಸೈನ್ಯಂ ಸವಿದುದು |
ಪರಿಪರಿತಾಪದೊಳು ನಂದಿಹತಿಯಿಂದದರಿಂ ||
ಭರಕೋಪವ ಪಡೆದಿಂದ್ರಂ |
ಕರದೊಳ್ ಶರವಿಡಿದು ತಾನೆ ಕಾದಲ್ಬಂ ದಂ ||೨೧

ಶತಮೂರ್ಖ ವೃಷಭಕೇಳೈ |
ಮಿತಿಮೀರಿತು ನಿನ್ನ ಕೋಪವಿನ್ನಿದು ನೋಡೈ ||
ಶತಪತ್ರಮಿತ್ರ ಪುತ್ರನ |
ಜತೆಗೂಡಿಪ ಮೇಘ ಬಾಣವೆಂದಂ ಶಕ್ರಂ ||೨೨

ಇದರಿಂ ಜೀವದೊಳುಳಿದರೆ
ಮದನಾರಿಯ ಭಕ್ತನೀನು ಸತ್ಯಂಜಗದೊಳ್ ||
ಕದನದೆನಿನ್ನಂ ಜಯಿಪುದು
ವಿಧಿಹರಿಗಳಿಗರಿದು ನೀನೆ ಪರದೈವವೆಸ್ಸೈ || ೨೩

## — ವಚನ —

ಎಂದಾ ಸಂಕ್ರಂದನಂ ನಂದಿಯಂ ಕೋಲ್ಪುಪಾಯದಿಂ ಮೇಘಾಸ್ತ್ರಮಂ ಬಿಡೆ ||೨೪

## (ಮತ್ತೇಭವಿಕ್ರೀಡಿತವೃತ್ತ)

ಬಶವೇಶಂ ಸಭೆಯಿಂದ ಕಾಲ್ದೆಗೆದ ನಂದೀಶಂ ಮಹಾಕೋಪದಿಂ |
ದೆಸೆದಂ ತನ್ನಯಕಾಲ ಮೇಘಮೆನಲೋ ಸಂಕ್ರಂದನಂ ಹಸ್ತದಾ |
ಪೊಸವಜ್ರಾಯುಧ ಭೀತಿದೋರಿ ನಗಸಂಘಂಪಾರಿ ಬರ್ಪಂದದಿಂ ||
ಪೊಸಕಟ್ಟೆಸ್ಪಣೆಯಿತ್ತನೆಂದೆನಲೊನಾಂ ಜೀಮೂತ ಸಂಘರ್ಷಕೆ ||೨೫
ಬಲುದೊಡ್ಡಿತ್ತಹ ಮೇಘಸಂಘಬರಲಾ ನಂದೀಸಸದ್ಧೈರ್ಯದಿಂ ||
ತಿಲಮಾತ್ರಂ ಮನಸಂದೆಗಂ ಬಡೆಯದಾ ಫಾಲಾಕ್ಷಸಧ್ಯಾನದಿಂ ||
ಛಲದಿಂ ಶ್ವಾಸವಬಿಟ್ಟನಾಗ ದಿವಿಜರ್ದಿಕ್ಕಾಣದಂತಾಗೆ ವ್ಯಾ
ಕುಲಗೊಂಡಿಂದ್ರನಮೇಲೆ ಬಿದ್ದವಗಗಳ್ಮೇಲಾದ ಭೂಜಾತಗಳ್ ||೨೬

## [ಚಂಪಕಮಾಲಾವೃತ್ತ]

ಕವಿದಪು ನಂದಿಘ್ರಾಣಬಿಸಿ ಶ್ವಾಸದೊಳೆತ್ತಲು ನೋಡದಂದದಿಂ
ದವನಿಯ ಮೇಲೆವಾಸಿಪ ಮಹಾನಗ ಸಂಕುಲ ಭೂರುಹಾದಿಗಳ್
ಭವಣಿಯನೇನು ಬಣ್ಣಿಸುವೆನಿಂದ್ರನ ಸೈನ್ಯವ ಚೂರ್ಣಮಾಡೆ ತಾ
ಭವಹರ ಮಾಲಶಸ್ತ್ರವೆಸೆದಾ ಘನತಾಪವ ನೀಗಿ ಶಕ್ರನು ||೨೭
ತಿಮಿರ ಸುಶಸ್ತ್ರ ಚಾಪದೊಳು ಪೂಡುತನಂದಿಯ ದೇಹತಾಣಕೆ
ಸುಮನಸಕಾಂತನೆಚ್ಚನೋಡನಾ ರವಿಚಂದ್ರರ ತೇಜಮುಳ್ಳಿಸಿ ||

ಸುಮನರನೇತ್ರಗಾಣದೆ ಸುವಾಹನ ಸಿಂಧೂರವಾಜಿಸ್ಯಂದನಾ
ದ್ಯಮಿತಪದಾತಿಯತ್ತ್ತಸುರರೆತ್ತಲೊತಾನದುಕಾಣದಾಯಿತ್ತೈ । ೨೮

—[ ವಚನ ]—

ಇಂತಾಸಂಕ್ರಂದನಂತಿ ಮಿರಾಸ್ತ್ರಮಂಬಿಡೆ ೨೯

[ಮತ್ತೇಭವಿಕ್ರೀಡಿತವೃತ್ತ]

ಭರಜೀಗೈ ಸುತಬರ್ಪಬಾಣನನು ತಾಳಲ್ಬಲ್ಲರುಂಟೇಮಹಾ
ಧುರದೊಳ್ಜಂಬಖಳಂ ಹತಂದಳಿದ ಮೆಣ್ವೀರಾದಿವೀರರ್ಕಳುಂ ।
ಕರಶಸ್ತ್ರಂಗಳಚೆಲ್ಲಿ ಜೀವದುಳಿವಂ ತಾವ್ಕಂಡರೀಬಾಣದಿಂ ।
ಗಿರಿಜೇಶಂ ವರನಂದಿರಕ್ಷೆಯೆನಿತುಂತಾಮಾಳ್ಪನೆಂದರ್ಜನಂ । ೩೦

(ಲಮಾಲಾವೃತ್ತ)

ಕಾಳಿಯುರೂಪ ಮಾಂತುಭರದಿ ಭುವನಾಳಿಯ ಗಾಡುಗೈವುತಂ
ಧೂಳಿಯುಪಾರಿ ನೇತ್ರ ತೆರೆಮುಚ್ಚುವ ಘೋರ ಭಯಂಕರಾಸ್ತ್ರತಾ
ಶೂಲಿಯ ಭಕ್ತನಂದಿತನು ವೆಲ್ಲಿದೆಕೊಲ್ಲುವೆನೆಂದು ಪೋಗಸ ।
ಛ್ಛೀಲಸುಚಕ್ಷುವಹ್ನಿಯಲಿತಾನದ ನ ಶವಗೈದುನಿಂದನು ॥ ೩೧

]ಕಂದಪದ್ಯ]

ಮೀರಿದಶರಗಳ್ಬಸವನ ।
ಧೀರತೆಯಿಂದಡಗಿ ಪೋಗಲಾಸಮುಯದೆಶಾ ।
ವಾರಿಜಮಿತ್ರನ ಪುತ್ರನು
ವಾರಿಧಿಯಂದದಲಿ ಘೋಷಗೈದಂಮನದೊಳ್ ॥ ೩೨

ನುಡಿದಂ ನಂದಿಯೊಳೀತೆರ
ಬಿಡುಬಿಡು ಮನಛಲವು ಬೇಡ ಕೇಳೆಲೆಮೂಢಾ ।

ವೃಡನಿನ್ನಂ ಸಭೆವರೆಗುಂ ।
ಕಡುಸಾಸದಿ ತರಲುಕೊಟ್ಟನೆನಗಪ್ಪಣೆಯುಂ । ೩೩
ಎಲೆವೃಷಭನಿನ್ನ ಕೊಲ್ಲಲ್
ಛಲವಿಲ್ಲೆನ್ನೊಳಗೆ ಬಾರೋಗರ್ವವನೀಗೀ ।
ಮಲಹರ ಸಭೆಯೊಳಗಿಡದಾ ।
ರ್ಮಲೆತರೆನಾಂ ಬಿಡುವನಲ್ಲವೆಂದ ಬಿಡೌಜ । ೩೪
ಪರಶಿವನ ಪ್ರೀಯನೆನುತಲಿ ।
ಶರಗಳನಾಂ ಸಹಿಸಿಬಿಟ್ಟನದರಿಂ ನಿನ್ನೊಳ್
ಶಿರಿಪೆಚ್ಚಿತೆ ಬೇಗನೆ ನೀಂ ।
ಬರುವಿಯೊ ಬಾರದಲೆ ಪ್ರಾಣ ನೀಗುವಿಯೋಪೇಳ್ ॥ ೩೫
ಇದುವರೆಗೊಂದೇ ಸಭೆಯೊಳ್
ಮುದದಿಂ ನಾವ್ಕೂಡಿಯಾಡಿ ಶೋಭೆಯನೋಡಿ ।
ಕದನದಿನಿನ್ನಂ ಕೊಲ್ಲುಲ್
ಸದರೆಸದು ಮನವುದಯುವ ತೋರುವೆಬಾರೈ । ೩೬
ಮಧುಪಾನರ ಪಾಲಕನೀ ।
ಹದನವಪೇಳಲ್ಕೆಬಸವವೇದವ ಪೊಲ್ಪಾ ।
ಮಧು ರೋಕ್ತಿಯಿಂದೆ ಪೇಳಿದ ।
ಮಧು ಪಾನರ ಪೋಲ್ವ ಶಕ್ರಗತಿವಿನಯದಲಿ । ೩೭

## (ಚಂಪಕಮಾಲಾವೃತ್ತ)

ಸುಮನರಕಾಂತ ನಿನ್ನಪಣದಿಂ ಫಲವಾಗದುದೇವಭಕ್ತನೋಳ್
ಭ್ರಮೆಯೊಳುಭಾಷೆಗೈದೆ ತಿಲಮಾದರು ಮುಂದಿನ ಭಾವನೋಡದೆ ।
ಅಮಿತಮದಪ್ಪದರ್ಪವನು ತೋರುತ ಕರ್ಕಶಬಾಣಬಿಟ್ಟರಿಂ ।
ದುಮೆಶಿವಮೆಚ್ಚಲಾರರದರಿಂ ನಿಜಸಂಘದೆ ಪೋಗುಬೇಗದಿಂ । ೩೮

## (ಮತ್ತೇಭವಿಕ್ರೀಡಿತವೃತ್ತ)

ಛಲದಿಂಪೆನ್ನಸು ಕೊಲ್ವೆನೆಂದರಿದೆನೀಂ । ಪದ್ಮಾಕ್ಷನೈತ್ತೇಂದ್ರಸ ।
ಜ್ವಲಕೇಡಾಗಪೆ ನಿನ್ನನಾರಿಯುರ ಮೇಣ್ಮೇಲಾದ ಸರ್ವಸ್ವಮಂ।
ಬಲಿಗೊಟ್ಟಲ್ಲಪೆ ಜೀವದಾನಪಡೆವೈ ಶುಂಭಾದಿಸದ್ವೀರರೋ ।
ಜ್ವಲದಂಡಕ್ಕಗಜಾತೆಯಂ ಭಜಸಿವೈ ನಿನ್ನಿಂದಲಾಂ ಸಾಯ್ವೆನೆ ॥ ೩೯

ಮದಮೂರ್ಖಾ ಕುಲಗೇಡಿ ಹಿಂಸಕಖಲಾದುಷ್ಟಾ ಮಿಪಾಪಾತ್ಮಕಾ
ಮಧುಪಾನಾಶುಚಿ । ಪೋಗುನಿನ್ನತೆರದಿಂ ದಿನ್ನೇಸುಸುತ್ರಾಮರು ।
ಕದನಂದೋರಲು ಬಾರೆನಾನುನಯದಿಂ ಬಾಗುತ್ತಿದಂ ಪೇಳ್ವೆನು ।
ಹದನಂಸಲ್ಲದು ಕೊಲ್ವೆನೆಂಬುದದುನೀಂ ಮಾರುತ್ತರಂ ಮಾಣೆಲೊ । ೪೦

## (ಕಂದಪದ್ಯ)

ಈಪರಿನುಡಿಯಂ ಕೇಳುತ ।
ಚಾಪದೊಳಗವೈರಿ ತೊಟ್ಟೆ ಮಂತ್ರಾಸ್ತ್ರಗಳಂ ।
ಕೋಪಪೆ ಬಸವಂಶೃಂಗದೆ ।
ಭಾಪೆನುತಂ ಕಡಿದುಚೂರ್ಣಗೈದಂ ರಣದೋಳ್ । ೪೧

ಬಾಣವು ಮೀರಲು ತಾಪದೆ
ವಾಣಿಯವರನಸ್ತ್ರ ತೊಟ್ಟನಿಂದ್ರಂ ಛಲದಿಂ ।
ಕ್ಷೋಣಿಗೆಯಚ್ಚರಿಯೆನೆವೋಲ್ ।
ಮಾಣದೆ ಬಸವೇಶನುಂಗಿಬಿಟ್ಟಂ ರಣದೋಳ್ ೪೨

ಘುಡಿಘುಡಿಸುತಿಂದ್ರನೆಂದಂ ।
ಹುಡುಗಾಟಿಕೆಯಲ್ಲ ಪಶುವೆನೋಡಿದುನಿನ್ನಂ ।
ಘಡಘಡನಡುಗಿಪವನ್ನಿಯು ।
ಕಡುತರಬಾಣವನು ಸಹಿಸಿ ಜೀವದೊಳುಳಿಯೈ ೪೩

ಈಶರಮಂ ಸಹಿಪೊಡೆತಾ ।
ಪೂಶರಹರಗರಿದು ನಿನ್ನಬರಹವನಳ್ಕಿಸಿ ।
ಘಾಸಿಯ ಮಾಡುತತಾನೀ ।
ವಾಸವನೊಳ್ಪಹುದು ಸತ್ಯಪಂಥವಿದೆಂದಂ ॥ ೪೪

## — ವಚನ —

ಇಂತಪ್ಪಾಗ್ನೇಯಾಸ್ತ್ರಮಂ ಮೂಡಿಗೆಯಿಂ ಪೊರಿವೆಗೆಯಲ್ ||

[ಚಂಪಕಮಾಲಾವೃತ್ತ]

ಹುತವಹಬಾಣಮಂ ಪೊರಗೆ ಮೂಡಿಗೆಯಿಂ ತೆಗೆಯಲ್ಕೆ ಶಕ್ರತಾ |
ನತಿಶಯಧೂಮವರ್ಬಿತುದಧೀ ಜಲಮುಕ್ಕಿತುವೇರಿದಪ್ಪಿತಾ |
ಪತಿತಮದಾಗೆ ಪರ್ವತದ ಸಂಕುಲಕಾಯ್ತವು ಘೋರತಾಪದಿ |
ಮತಿಭ್ರಮೆಯಾಯ್ತು ಜೀವಿಗೆ ಸುರಾಸುರವೃಂದಕೆ ಕಾಲಮೀರಿತ್ತೈ |

[ಮತ್ತೇಭವಿಕ್ರೀಡಿತವೃತ್ತ]

ಬಹುಕಾಲಂ ಜಲಪೀರ್ವವೇನೆಸುತ ಲೊಂಪೇಬಾರಿತಾ ಕೊಳ್ವೊಡೆ
ದಹದೇವಂ ಶತರೂಪಮಂ ತಳೆದನೋ ಶ್ರೀಶಂಭುಕಣ್ಗೆಚ್ಚೆವೋ |
ಮಹದಾಕ್ರೋಶದಿ | ನಂದಿಶಕ್ರಗಿದಿರಿಟ್ಟುತ್ಪಾತನಂ ತೋರಿತಾ |
ಸಹನಂ ಗಾಣದೆ ರೋಷಗೊಂಡನಲನೋ | ತಾನೆಂಬವೋಲ್ತೋರಿತ್ತೈ |
ಶರಮಂಚಾಪದೆ ಪೂಡುತಿರ್ದನಗವೈರಿ ಕ್ರೋಧಮಂ ಬೀರುತ
ಭರದಿಂತುಂಬಿದುದಾಗ ಭೂಶರಧಿಶೈಲಾಗ್ರಂ ಮಹಾವಹ್ನಿಯಿಂ |
ದರರೇನೋಡುವರಾರು ಕಾಳಗಸುಡ್ಡೈಶೈಲಾರಿತಾಂಸತ್ತರೇ |
ನುರಿಯೊಳ್ಸಾಯುವವೆಂದು ಚೀರುತಮರರ್ಕಾಲ್ಬಿಟ್ಟರಾರಂಗದಿ | ೪೮

[ಉತ್ಪಲಮಾಲಾವೃತ್ತ]

ಕಾದವು ಶೂರರೇರಿರುವ ವಾಹನಮೆಲ್ಲವು ಹಸ್ತವಾಘಗ
ಳ್ಕಾದವುದೇಹರತ್ನವಸನಂಗಜಮಲ್ಲರ ಮುಷ್ಟಿಯಂಕುಶಂ
ಕಾದವು ಬಾಣ ಬತ್ತಳಿಕೆ ತೇಜರಥಂ ಪದಸೈನ್ಯದಾಯುಧಂ
ಕಾದುವದೆಂತು ನಾವ್ಪಸವ ದೇವನೊಳಿನ್ನುತಲೋಡಿ ಪೋದರ್ವೈ | ೪೯

[ಕಂದಪದ್ಯ]

ಇಂಗಳ ಬಾಣವ ಬಿಡೆತಾ ।
ಕಂಗಳತ್ರಿತಯಾಂತಕಲ್ಪದಂ ತದುತೋರಲ್
ಮಂಗಲರೂಪಂ ಬೆದರದೆ ।
ಕಂಗಳೊಳೀಕ್ಷಿಸುತ ಶಿವನ ಸ್ಮರಿಸಿದನಾಗಳ್ । ೫೦

ಮೀರಿದ ಶರದಾವೇಶಕೆ
ಚೀರಿದುದ ಖಿಲಾಂಡಕೋಟಿ ಜೀವರಗಡಣಂ
ಮಾರಾರಿಭಕ್ತನಿದರಿಂ ।
ಪಾರಾಗುವ ಬಗೆಯುಗಾಣೆನೆಂದರ್ದಿವಿಜರ್ । ೫೧

## ವಚನ

ಇಂತುಬರ್ಪಾಹುತಾಶನಾಸ್ತ್ರಮಂ ಬಸವೇಶಂ ಕನಲ್ದೀಕ್ಷಿಸಿ ತನ್ನ ಮುಂಗಾಲಿನಿಂದವನಿಯಂ ಭರದಿಂಬೆರಟಲ್ ॥ ೫೨

[ಕಂದಪದ್ಯ]

ಚಿನ್ಮಲು ಪಾದದೆ ಧರೆಯೊಳ್
ಚಿಮ್ಮಿತು ಶತಶರಧಿಯಂತೆ ನಿರ್ಮಲದುದಕಂ
ಹಮ್ಮಿದಪಾವಕ ಕಿರಣವ
ಗಮ್ಮನೆ ಸುಖಶಾಂತ ಗೈಸಿತಾಗೆಲೆ ರಾಮಾ। ೫೩

ಮೇರೆಯುಮೀರುತ ಬರುವಾ ।
ವಾರಿಯೊಳಾ ಸುರಪ ಸೈನ್ಯದನಲನನಾಶಂ ॥
ತೋರಿಹುದಲ್ಲದೆಮತ್ತಂ ।
ಗಾರಾಗುತಲಿಂದ್ರ ಕಟಕಕಾದುದು ಘಾತಂ । ೫೪

(ಚಂಪಕಮಾಲಾವೃತ್ತ)

ನೆನೆದವುನಂದಿಪಾದ ಜಲದಿಂದಮುರಾಳಿಯ ಶಸ್ತ್ರಮೆಲ್ಲವು
ಮನದೊಳುವಿಸ್ಮಯಂ ಬಡುತಲಿಂದ್ರನು ತೊಟ್ಟನು ದಿವ್ಯಬಾಣಮಂ
ಘನತರಸಾಹಸತ್ವವನು ತೋರಲು ನಿಷ್ಫಲವಾಯ್ತು ವಾರಿಯಿಂ ।
ದಿನಪಜಸ್ಸೈನ್ಯತೇಲ್ದುತುರಗಂಗಜ ಮಲ್ಲರು ಕೂಡಿಪೋದರ್ಸೈ ॥ ೫೫
ಶಿವಶಿವಸತ್ತೆವೆಂದು ಕರದಿಂಶರ ಖಡ್ಗವಬಿಟ್ಟುಶೂರರು ।
ಭವಹರಪಾಲಿಸೆಂದು ಮರುಗುತ್ತಲಿ ಬೀಳುತ ತೇಲುತೇಳುತ ।
ತವಕದಿಪೋಗೆಕಂಡು ಸುರಸಂದೆನೆಗಾಣದೆ ನಂದಿಯಾಶೆಯಂ ।
ಜವದೊಳುಬಿಟ್ಟು ಕಾಲ್ದೆಗೆದನಾರಣದಿಂ ಗಿರಿಜೇಶನಲ್ಲಿಗೆ । ೫೬

## ವಚನ

ಕೇಳೆಲೆ ಶಿದ್ಧರಾಮುನೀಂ । ಸುರಪತಿಯು ದುರಾಗ್ರಹವನ್ನಳಿದು ರವಿ ಬಿಂಬಮಂ ಕಲಂಕ ಮಾಡಲೆಳಿಸಿ ಕಲ್ಮಷಮಂ ಗಗನದೊಳ್ತೂರಿ ತನ್ನವದನದ ಮೇಲೆ ಕೆಡಪಿಕೊಂಡಮಂದ ಮನುಜನವೊಲ್ ನಾಶಿಕಮಂತೆಗೆಯಿಸಿ। ಮುಕುರಮಂ ಕೊಂಡಮೂರ್ಖನ ಪೋಲ್ ಲಜ್ಜೆಯಂ ದೊರೆದು ಶಿವಸಭೆ ಗೈದುತಾನಿಂತೆಂದಂ । ೫೭

(ಚಂಪಕಮಾಲಾವೃತ್ತ)

**ಪುರಹರ ರಕ್ಷಿಸೆನ್ನ ವರನಂದಿಯ ಘಾತಕೆಗಾರುಗೊಂಡೆನಾಂ ।**
**ಭರದೊಳುಪೋಗಿ ಪಾದವಿಡಿದುಂ ನಯದಿಂದಲಿ ಬೇಡಿಕೊಂಡರಾ ।**
**ದರಿಸದೆಕೋಪದಿಂ ಧರೆಯಚಿಮ್ಮುತ ಭೂಜಲಪರ್ಚಿಸುತ್ತತಾಂ ।**
**ಬಿರಿನುಡಿಯಿಂ ಕರಂಜರೆದುಬಿಟ್ಟನು ಬಂದೆನಿದೆಂದನಿಂದ್ರನು । ೫೮**

(ಕಂದಪದ್ಯ)

**ಸುರಪನು ವಿನಯುದೆಪೋಗಿ ।**
**ದಿರಮಂ ಗಿರಿಜೇಶನಲ್ಲಿ ಪುಸಿಯಿಂದಾಡಲ್**
**ಶರಧಿಯೊಳಿದ್ದಾ ಪಾವಕ ।**
**ಪರಿಯಂದದಿಕೋಪಶಾಳ್ದ ಗೌರೀನಾಥಂ ॥ ೫೯**

(ಮತ್ತೇಭವಿಕ್ರೀಡಿತವೃತ್ತ)

ಎಲೆ ಸಂಕ್ರಂದನನೀಚನಿನ್ನಪುಸಿಯುಂ ನಾಕೇಳ್ವಿನೇ ಮೀರಿದಾ ।
ಬಲದಿಂ ಯುದ್ಧವಮಾಡಿ ಪೊಯ್ದುಭರದಿಂ ನಂದೀಶನಂ ನೋಯಿಸಿ ।
ಛಲಗೆಟ್ಟೋಡುತ ಬಂದುಸಮ್ಮುಖದಿನೀ ನಿಂತಾಡಲೇಂ ಘಾತನೋ ।
ನೆಲದೊಳ್ಜನ್ಮವ ತಾಳ್ವದೆಂದು ಖತಿಯಿಂ ತಾಶಾಪವನ್ನಿತ್ತನು ॥ ೬೦

(ಕಂದಪದ್ಯ)

ಫಾಲಾಕ್ಷಶಾಪನೀಡಲ್
ಹಾಲಾಹಲ ಕಂಡತೆರಮೊಳಿಂದ್ರಂಭಯದಿಂ ।
ಶೂಲಿಗೆಬಾಗುತ ಪೇಳಿದ ।
ನಾಲೋಕಿ ಸುದೇವನಿನ್ನ ಬಾಲನನುಡಿಯಂ ॥ ೬೧

ಮಕ್ಷಕನಂ ಕೊಲುವದಕಂ ।
ಲಕ್ಷಣವತ್ಪರ ಶುಯೋಗಗೈವರೆ ದೇವಾ ॥
ಶಿಕ್ಷಣರ ಕ್ಷಣಧವನೀ ।
ರಕ್ಷಿಸುತವಬಾಲನಜ್ಞ ಭಾವವನಳಿದು । ೬೨

ಪಶುವೆಂದೆನಿಸುವೆ ನಾನುಂ ।
ಪಶುಪತಿಯಂದೆನಿಪೆ ನೀನು ಮಲ್ಲದಲಾನುಂ ।
ಶಿಸುವೆಂದೆನಿಸುವೆ ದೇವಾ
ಬಿಸಜಾಕ್ಷನ ವರದನೀನು ರಕ್ಷಿಪುದೆನ್ನಂ ॥ ೬೩

(ಮತ್ತೇಭವಿಕ್ರೀಡಿತವೃತ್ತ)

ಪಡೆದಮ್ಮಂ ತವಬಾಲನಂ ಹತಿಸೆಮೇಣ್ಮೇಲಾದ ಸಸ್ಯಂಗಳಂ ।
ಮೃಡದೇರ್ತ್ರಾನಪ ಹಾರಗೈಯುಗಗನಂ ತಾಬಂದು ಮೇಲ್ಬೀಳಲು ।
ನಡೆಯೊಳ್ಕುಂಜರ ಪಾದದಪ್ಪಿ ಪತಿತಂತಾನಾದರಾವರ್ಣಿಪರ್
ಮೃಡನೀ ಕೋಪವ ದೋರಲಾರ್ಸಹಿಪರ್ಕೈ ಬೇಡೈದಯಾಸಾಗರಾ । ೬೪

ಆರಿದಾಂ ಮಾಡಲಿಗರ್ವದಿಂದಲಿಪನಾಂ ಮಾಡಿರ್ದರೇಂದೇವನಿ ।
ನ್ನದುಕೋಪಾನಲ ಪಾಸುತಾಳ್ವೆನೆ ಸುತರ್ತೋರಿರ್ದದುಷ್ಕೃತ್ಯಕೆ ।
ಕೊರಳಂ ಕೊಯ್ವುರೆಮಾತೆತಾತರದರಿಂ । ನೀನೋಡುಕಾರುಣ್ಯದಿಂ ।
ಧರೆಗಾಂಜೀವಿಸಲಾರೆ ಶಂಭುಕೊಡು ಬೇಗೀಬಾಲಗುಶ್ಯಾಪವ ॥ ೬೫

(ಕಂದಪದ್ಯ)

ಶತದಶನಯನಂ ನಡಗುತ ।
ಲತಿಶಯದಿಂ ದೈನ್ಯದೋರಲಾಕ್ಷಣಕರುಣಾ
ನ್ವಿತಗೌರಿನಾಥಸುಮನಸ ।
ಪತಿಯೊಳ್ತಾಂ ಕೋಪಮಾಣ್ದು ತಾಳ್ದಂ ತೋಷಂ ।
ಉತ್ತುಮರಕೋಪಕ್ಷಣದಲಿ ।
ಚಿತ್ತವತಾಂ ಬಿಡುವದೆಂಬ ನುಡಿನಿಜವಲ್ತೇ ।
ಚಿತ್ತಜಹರನೊಳ್ದಯದು ।
ತ್ಪತ್ತಿಯುಮೂಡುತ್ತ ಪೇಳ್ದನುಶ್ಯಾಪವನು । ೬೭

(ಚಂಪಕಮಾಲಾವೃತ್ತ)

ಸುರಪನೆಪೋಗು ಪುಟ್ಟುಧರೆಯಲ್ಲಿರು ಸಂಪದ ಸೌಖ್ಯದಿಂದನೀಂ
ದೊರಕಿತು ನಿನ್ನಕರ್ಮದಲಿ ಶಾಪದವಾಕ್ಯವು ನಷ್ಟಮಾಗದು
ಧರೆಯೊಳು ನೀನುದೇವಗುರುಭಕ್ತಿಯ ಪೊಂದಿರೆ ನಾನು ತೋರುವೆಂ
ವರಬಸವೇಶಬರ್ಪ ಬಗೆಯಂ ಫಿನಗಾತನ ಲಿಂಗದಿಂದಲಿ । ೬೮

(ಕಂದಪದ್ಯ)

ಪುರಹರ ನಿಂದ್ರಗೆ ಕರುಣದಿ
ವರದುಶ್ಯಾಪವನು ಕೊಡಲು ನರಜನ್ಮಂತಾ ।
ನುರುಚಿಂತೆಯ ಪರಿಯನ್ನುತ
ಚರಣಕೆ ಬಾಗುತ್ತಲವನು ಶೋಕಂಗೈದಂ ॥ ೬೯

ಕಂಬನಿಗರೆಯುತನೆರದಿಹ
ಶಂಬರ ಹರತಾತ ಮುಖ್ಯ ಸಭಿಕರ್ಕಳತಾಂ ।
ನಂಬಿಗೆಗೊಂಪಸು ಪೋಗುವ ।
ಕುಂಭಿನಿಜಯಕಾರ್ಯ ಕಾಗಿಸಂಭ್ರಮದಿಂದ್ರಂ । ೨೦

ಪರಸಿತು ದಿವಿಜರ ಗಡಣಂ
ಪರಶಿವಮುದಮಾಂತು ಕೊಟ್ಟಸಿಂಪ್ರನಿಗಭಯಂ ।
ಭರದಿಂ ಸರ್ವರನಮಿಸುತ ।
ಧರೆಯೊಳ್ಪುಟ್ಟಲ್ಕೆಪೋದ ಶೋಕದಿಶಕ್ರಂ । ೨೧

## ವಚನ

ಇಂತಾ ಪುರಹರ ಸಭಾವಿಸರ್ಜನಮುಂಗೈದು ಧರೆಯೊಳು ಜನ್ಮತಾಳ ಲೆಂದು ಸಂಕ್ರಂದನಂ ಪೋಗಲಾ ಸಭಿಕರ್ಕಳ್ ಸ್ವಗೃಹ ಕಾಸತರಾದರ್ ॥ ೨೨

## ಗದ್ಯ

ಇದು ಶ್ರೀಮದ್ವೀರ ಶೈವಾಚಾರಧು ರೀಣಶಾಂತವೀರ ದೇವರೊಡ ಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾಕಾವ್ಯದೊಳ್ ಚತುರ್ಥಾಶ್ವಾಸಂ ಸಮಾಪ್ತಂ ಅಂತುಸಂಧಿ ನಾಲ್ಕಕ್ಕಂ ಗದ್ಯಪದ್ಯಂಗಳು ಮೂರುನೂರಕ್ಕಂ ಮಂಗಲಮಹಾ



# ಃ ಪಂಚಮಾಶ್ವಾಸ ಪ್ರಾರಂಭ. ಃ

## (ಮಹಾಸ್ರಗ್ಧರಾವೃತ್ತ)

ಗಿರಿಜೇಶಂ । ಪಾಪನಾಶಂ । ಹರಿಸುರಪವಿಧಾತೃಸ್ವಕೋಶಂ । ವಿನಾಶಂ।
ಖರನೇತ್ರಂ । ಪುಣ್ಯಗಾತ್ರಂ । ಹಿಮಕರರವಿತೇಜಪಾತ್ರಂ । ನಗಾತ್ರಂ।
ಪುರಧೀರಂ । ನಾಶಮಾರಂ । ನುತಮಂಹರ್ರಿನೇತ್ರೈಕಧಾರಂ । ಸುವೀರಂ
ಗರಳಾಂಗಂ। ನಾಗಭಂಗಂ। ಪೊರೆಗೆಸುಮುನಿಮೋದಾಂತರಂಗಂ ।ಸುಲಿಂಗಂ।
ಶಿರಮಾಲಂ ಕಾಲಕಾಲಂ ನತಜನಸುಖಕೀಲಂ ಸದಾಗಾನಲೋಲಂ
ಧರವ್ಯಾಲಂ ಭಕ್ತಜಾಲಂ ಕಮಲಭವಕಪಾಲಂ ಶಿರೋಧಾರಚೇಲಂ
ಸುರಪಾಲಂ ಮೋದಶೀಲಂ ಭವಲತೆಹತಮೂಲಂ ಗಜತ್ವಗ್ದುಕೂಲಂ
ಕರಶೂಲಂ ಕಂಠನೀಲಂ ಪೊರೆಗೆರಮಾನಾಥಗೋಲಂ ಕೃಪಾಲುಂ ೧

## ವಚನ

ಸುರಪಂ ಪೋಗಲಿತ್ತ ವೃಷಭನ ಕೋಪಾನಲಂ ಪ್ರಜ್ವಲಿಸಿ ಪಾದ
ದಿಂದೇಳ್ದ ಜಲದಿಂಧರೆಯಲ್ಲಂ ಮಹಾಭಂಗಗೊಂಡುದು । ೩

## [ಚಂಪಕಮಾಲಾವೃತ್ತ]

ವೃಷಭನಕೋಪದಗ್ನಿಯದು ಪ್ರಜ್ವಲಿಸುತ್ತಲಿಸರ್ವದೇಶಮು॥
ನ್ನೆಸೆವಸುಪರ್ವತಾದಿ ಘನಕಾನನವೆಲ್ಲವ ನಾಶಗೈವುತಂ ।
ಬಿಸಿಗಿರಣಂಗಳಿಂ ನಗರಗರ್ಭದ ಹೇಮಮಯಾಗರಂಗಳಂ ।
ತುಸುವಿರದಂತೆ ಪಾಳುಗವಿಯಲ್ಧರೆ ದೇವತೆ ನೊಂದುನಿಂದಳು । ೪

ಚರಣದಿಭೂಮಿಯಂ ಬಿರಟುತಂಬಲಶೃಂಗದಿ ರಂಧ್ರದೋರುತಂ।
ಮೆರೆವಸುನಂ ದಿರೋಷದಲಿ ನೇತ್ರದೆ ಕೆಂಡವ ಕಾರ್ದಧೂಮದಿಂ।
ಪರಿವರಮೆಲ್ಲಿಕಾನನಮದೆಲ್ಲಿ ದಿವಾಕರನಂಶಗಾಣೆವೀ ।
ಧರೆಯಿದು ತಾವಿನಾಶವಹುದೆನ್ನುತ ಭೂಜನಶೋಕದಾಳ್ದುದು । ೫

(ಕಂದಪದ್ಯ)

ಈ ನರಿ ಬಸವನಕ್ರೋಧದ ।
ತಾಪವಸಹಿಸದಲಿ ನೊಂದು ಭೂದೇವಿಯಾಗ ।
ಮೂಪ್ರರಪರ ನೀತನತಾಂ ।
ಕೋಪದೊಳೆನ್ನನ್ನು ಕೊಲ್ಲ ಕಳುಹಿದನೆಂದಳ್ ॥ ೭ ॥

ಸಿಡಿಮಿಡಿಗೊಳ್ಳುತ ಭೂವಧು
ಕಡುಸಂಕಟಬಡಲು ದೇವಿಯೊಡಲಿನ ರನ್ನಂ
ಸಿಡಿದವು ಕೋಪದ ಚಿತೆಯೊಳ್
ಬಿಡುಗಡೆಮಾಡುವರದಾರುಕೇಳೆಲೆರಾಮ ॥ ೭ ॥

ಎಂದಿಗೆ ಪೋಪುದೊ ತಾಪಮಿ
ದೆಂದಿದೆ ರಕ್ಷಿಸುವ ಸೀವ ನೆನ್ನಂದಯದಿಂ
ದಿಂದೆನಗೆ ಮೃತ್ಯುವದಗಿಹು
ದೆಂದಿಗೆ ಸುಖಗಾಣ್ಬೆನೆಂದು ಮಾದನಿಗೊಂಡಳ್ ॥ ೮ ॥

ತಲೆಕಾಯಿತೆನ್ನ ವೈಶಿರಿ
ಕುಲಮಡಗಿಮ ದಕಟನಾನು ಮಾಡುವದೇನೈ
ಮಲಹರರಕ್ಷಿಪುದೆನುತಲಿ
ಹಲುಬುತನೆಲವೆಣ್ಣು ಶೋಕಗೊಂಡಳ್ಮನದೊಳ್ ॥ ೯ ॥

ಶರಧಿಯ ಮುಳುಗಲು ಬಹುದಾ
ಗಿರಿಶಿಖರವನೇರಿ ಪ್ರಾಣಬಿಡುವದು ಲೇಸೈ
ವರಬಸವನ ಕರ್ಕಶಮಾ
ದುರಿಯಂಸಹಿಸುವಡೆ ಶಕ್ಯಮಾರಿಗೆಕೇಳೈ ॥ ೧೦ ॥

ಇಂತೆಂದು ಪೇಳ್ದ ಚೆನ್ನನ
ಚಿಂತೆಯೊಳಂ ಕೇಳ್ದ ಶಿದ್ಧರಾಮೇಶಂತಾಂ
ಮುಂತೆಂತು ಗೈದಳೀಪರಿ
ಭ್ರಾಂತಿಯ ಭೂಕಾಂತೆ ಪೇಳು ಬೇಗದೊಳೆನುತಂ ॥ ೧೧ ॥

# ವಚನ

ಆಗಳಾಕರ್ಣಿಸ್ಥಿ ಚೆನ್ನಬಸವನೆಂದನೆಲೆ ಸಿದ್ಧರಾಮನೀಕೇ
ಕ್ಷೆಂತಾಪದುರಿಯೊಳ್ಕೊಂದುಃ ಕಂಗೆಟ್ಟು ಬಾಯಾರಿ ಬಳಲಿ
ಯಾಗಿರಿಜೇಶನ ಪೊರೆಗೈದಿ ಬಿನ್ನಪಮಂಗೈವೆನೆಂದು ಪೊರಮಟ್ಟಳ್ । ೧೨

## [ಚಂಪಕಮಾಲಾವೃತ್ತ]

ಕೆದರಿದಕೇಶದಿಂ ತಳೆದಧೂಳಿಡುವಂಗದೆ ನಾರಿನೇತ್ರದುಂ
ಬಿದಜಲದಿಂದ ಶೋಕಮನುಗೊಳ್ವನಿನಾದದೆ ಛಿದ್ರಮುಪ್ಪಚೇ
ಲದಿಕರಮುಕ್ತ ಮಂಗಲವಿಭೂಷಿತದಿಂ ಭ್ರಮೆಯಿಂಪಲಂಬುತಂ
ಮದನನವೈರಿವಾಸನಗಮೆಲ್ಲಿದೆ ಕಾಣುವೆನೆಂದು ಪೋದಳು । ೧೩ ।
ಮಲಹರನೆಂತು ಕಾಣ್ಬನೆನಗಕ್ಕಟ ದೇವನರೂಪುಗಾಣದಾಂ
ನಿಲಲರಿಯೇಂ । ಸುಡುತ್ತಿಹುದು ನಂದಿಯಜ್ವಾಲೆಯದೆಂದುಚೀರುತಂ
ಜಲಧಿನಗಂಗಳಂ ಜಿಗಿದುಕಾನನ ಮೆಲ್ಲ ವದಾಟಿ ಶೋಕಿತಾ
ಲಲನೆಯು ಪೋಗಲಾಗಿ ಶಿವಕೋಶರ ಜೋಗಿರಿವಾಸಕಂಡಳು । ೧೪ ।

## (ಮತ್ತೇಭವಿಕ್ರೀಡಿತವೃತ್ತ)

ಎಸದಿರ್ಪಾ ಗಿರಿಮಸ್ತಕಾಗ್ರನಭಮಂ ಪೋಲ್ದತ್ತು ಸತ್ತೇಜದಿಂ,
ಮಿಸುಪಂಗಾರಕ ತೇಜದಿಂದುಡುಗಳಿಂ ಮೇಘಂಗಳಿಂ ಹಂಸದಿಂ
ಶಸಿಪೋಲ್ರಂಜಿತಶೈಲದಿಂಭುಜಗದಿಂ। ಯೋಗಂಗಳಂ ಭೋದಿಸಲ್
ಪೆಸರಂತಾಳ್ದ ಬುಧಂ ಕವೀಂದ್ರ ಗುರುಮೇಣ್ಕಾನೀಶರಂಕೂಡುತ । ೧೫ ।
ಸಿರಿಪೋಲ್ಶೋಭನ । ದಾನವಾರಿ ತೆರದಿಂತಾನಾಭಿಲಾಷಂಕಲಾ
ಧರವದ್ರಂಜಿತಚಂದ್ರಿಕಂ ದ್ವಿಜನಮೋಲ್ಪಂ ಶೋನ್ನತಂ ನಾಕವ
ತ್ಸುರಭಿಗ್ರಾಹ ಶರಾವೃತಂ ರಣದಮೋಲ್ ಪತ್ರಾಂಕನಾಸ್ಥಾನವ
ಚ್ಛರಣಂ ತಾನೆನೆ ಲಿಂಗಶೋಭಿತದಿ ತಾನಾಶೈಲತೋರಿರ್ಪುದು । ೧೬ ।

[ಚಂಪಕಮಾಲಾವೃತ್ತ]

ಅಹಿಗಳಭೂಷನಾಗಿ ಶಿವನಲ್ಲವು ಪಾವಕವಾಸವಾಗಿತಾ
ದಹನನದಿಕ್ಕದಲ್ಲವು ಸುಗೋಗಣತಾಳಿರೆ ಗೋಷ್ಪವಲ್ಲವೈ
ಮಹಿಷದೆ ಕೂಡಿ ರಾಜಸದನಲ್ಲವು ಪಾಲ್ಗಡಲಲ್ಲವಾಸವಾ
ಗಿಹಹರಿಯಿಂದ ಖಡ್ಗಧರಿಸಿರ್ದರು ಶೂರನದಲ್ಲವಾನಗಂ । ೧೭ ।

[ಕಂದಪದ್ಯ]

ಕೇಳಿಲೆ ಸಿದ್ಧೇಶ್ವರನೇ
ಭಾಳಾಕ್ಷನವಾಸ ವಿಂತುಶೋಭಿಸೆಭೂವೇಣ್
ತಾಳಿದ ದುಃಖದಿ ಕಾಣುತ
ಗೋಳಿಟ್ಟಳು ಕೇಳ್ವರಾರು ನಾರಿಯಶೋಕಂ । ೧೮ ।
ಮೃಡನಂ ನೋಡದ ಯುವತಿಯು
ಮೃಡರೂಪವ ವೇದಸಾರದಿಂ ತಿಳಿದಿಹಳು
ಮೃಡನಂ ಪುಡುಕುವ ಕಾಲದೆ
ಮೃಡನಗಮಂ ಕಂಡುಮನದೊಳತಿ ಮುದಪಡೆದಳ್ । ೧೯ ।

[ಮತ್ತೇಭವಿಕ್ರೀಡಿತವೃತ್ತ]

ಶಿರದೊಳ್ಪೀಳುವ ವಾರಿಧಾರಿರಜತಾಂಗಂ ತಪಕುಮ್ಮೃದ್ರಿಜಾ
ವರಸಿಂಹಂ ಖಗೇಶಕ್ಕದೆ ಪೇರೊಡಲಸಾಹಸ್ರಾಕ್ಷ ಹುಂಕಾರ ಮೇಣ್
ಹರಿಹಂಸಂಮಿಗೆ ಪಾವಕಾಜನಿಕರಂ ಗೋಪಾಲನಾವೇಶಗಳ್
ನಿಱುತಂಪರ್ವತದಲ್ಲಿ ತೋರದಲನೇ ಮಾದೇವನೆಂದೆಂದಳು । ೨೦ ।

## ವಚನ

ಇಂತಾಭೂದೇವಿತಾಮನದೊಳ್ನಂದಿ ಭಯದಿಂ ಬೆರಗುಗೊಂಡು ಆಶಿವ।
ನಗವನೇ ಭವಹರನಿಂದೆಣಿಸಿಪರಕಿಸೆ ಕೈಲಾಸನಗಮೆಂದರಿದಿಂತೆಂದಳ್ ।೨೧

( ಕಂದಪದ್ಯ )

ಹರಸೇರುವಗಿರಿಶಿಖರಂ
ಹರರೂಪಮದಲ್ಲ ಧನ್ಯತೋರ್ಪುದೆ ಪೇಳಿಂ
ದುರಿತೋಪಹದ ಲಾದೇವಿಯು
ಗಿರಿತಳದೊಳ್ಬಿದ್ದು ದಂಡಪ್ರಣಮಮಂಗೈದಳ್ | ೨೨ |
ಇದನರಿತು ಭೂಮಿಜನಗಳ್
ಮದನಾರಿಯನಗದ ಶಿಖರಮಂ ಕಾಣುತೆತಾವ್
ಪದಮಲಮನದಿಂ ಮಣಿವ
ಮುರ್ದದಿಂ ಶಿವಪಾಲಿಸೆಂದು ಕೇಳಿಲಿರಾಮ | ೨೩ |
ಲಿಂಗವಧರಿಸಿ ಹುದೀಘನ
ಶೃಂಗವ ನಾಮಟ್ಟಲೆಂತು ಪಾದದ್ವಯದಿಂ
ಮಂಗಲಮಯ ವೆನ್ನಿಸಿತಾ
ನಂಗಜಹರ ರೂಪಮಾಗಿ ಶೋಭಿಪುದೆಂದಳ್ | ೨೪ |

## ವಚನ

ಇಂತುಮನಮುಗುಡಮನಾಂತ ಭೂಸಾರಿ ಭೂಧರ[illegible]ನ್ನೀಕ್ಷಿಸಲೆ ನಾಗನಾಥ್ಯವೆಂದು ಸಂದೆಗಂ ಮಾಳ್ಪನಿತರೊಳ್. | [illegible] |

( ಕಂದಪದ್ಯ )

ಬಂದುದು ಹರಶರಣಿರತತಿ
ಯಂದದಿಜಲಕೇಳಿಗೆಂದು ಸಾರಸಕಾಗಳ್
ನೊಂದುದು ಭೂದೇವಿಯುಮನ
ದಂದುಗ ಮಂಕಾಣುತವಳದುಃಖವ ಕೇಳ್ದರ್ |

ಎಲೆತಾಯೆ ನೀನದಾರ್ಮೆ
ಣ್ಣಲೆಯಾ ಪೃವದೇಕೆಬಂಪೆ ಶೋಕವದೇನ್ ॥
ಮಲಹರ ಚರಣ ತ್ರಾಣದೆತಾಂ
ತಲೆದೋರುವಸಂತು ದುಃಖಮೆಂದರ್ಶರಣಂ ॥ ೨೭

ಚಿಂತೆಯುನಾಶಿಪಪರುಷದ
ಚಿಂತಾಮಣಿಯೆಂದು ಪೆಸರಪಡೆದಿಹದೇವಂ
ಕಂತುವಿನಾಶಂ ನಗದೊಳ್
ಸಂತೋಷದಿವಾಸಿಸುವನು ಕೇಳೆಲೆತಾಯೇ ॥ ೨೮

(ಮತ್ತೇಭವಿಕ್ರೀಡಿತವೃತ್ತ)

ರುದಿಶಂತೋರದು ಶೈಲವಾಸಿಜನದೊಳ್ಸದ್ಭಾವ ಸಂಪರ್ಕದಿಂ
ಮದನಾರಾತಿಯ ಧ್ಯಾನಮಲ್ಲದದರಿಂ ನೀಮಾಡುವಾಕ್ರೋಶದಾ
ಹದನಂಗಾಣೆವು ಜೀವನಾಶಂಚಯದೆ ಜೀವತ್ಸಾರಿಕಾಲಕ್ಕೊಟತಾ
ನುದಯಂ ಚಿತ್ತವೊಲಾಯ್ತುಮಾತೆಮನದೊಳ್ತಾ ಬೀರಿತ್ತೈ ಚೋದ್ಯಮಃ

(ಕಂದಪದ್ಯ)

ಜನನಿಯೆಕೇಳ್ನಿನ್ನಯ ಘನ ।
ಮನದನು ತಾಪವನು ತನಯುರೆಂದೂಹಿಸುತಂ ।
ಮನಸಿಜ ವೈರಿಯಚರಣದೆ ।
ವಿನಯದಿಬೇಡುತಲಿ ಮೋಕ್ಷಗೈವೆವುಹಿತದಿಂ ॥

ಪರಿಪರಿ ವಿನಯದೆ ಕೇಳುವ ।
ಹರಗಣಕಭಿನಮಿಸಿ ಪೇಳ್ದಳಾಯುವತಿವಸುಂ ।
ಧರೆಶೋಕದಿಂದ ಬಸವನ
ಭರಕೋಪಕೆ ತಾಳದಾದಮನಸಂಕಟಮುಂ ॥ ೩೧

ಶರಣರೆ ನಿಮ್ಮಯ ನಿರ್ಮಲ
ಚರಣಕೆನಾಂ ನಮಿಪೆ ನಂದಿಕೋಪದಲಿತ್ತಾ ।
ಶಿರಿಯುಂ ಪೇಳುವದೆಂತದು ।
ಬರಿದಾಗಿಹುದೆನ್ನ ಭಾಗ್ಯರಕ್ಷಿಪುದೆಂದಳ್ ॥ ೩೨

ಆಸಮಯದೆ ಶಿವಗಣಮನ ।
ದಾಸಿಶಿಶಿವನಿಂ ವಿನಾಶಮಹುದಲ್ಲದೆಮೇ ।
ಣೇಸುಸುರ ಸಂಘದಾಗದು ।
ನಾಶಮದಿಂತೆಂದು ಶಿವನಸನ್ನಿಧಿಸಾರ್ಥರ್ ॥ ೩೩

ಇನ್ನೊರೆವೆ ಲಾಲಿಪುದುನೀಂ ।
ಸನ್ನುತಸಿದ್ಧೇಶ ಶರಣವಳಂ ಶಿವನಾ ।
ನನ್ನಿಯ ಸಭೆಯೊಳಗಿಡೆತಾಂ ।
ಮನ್ನಣೆಯಂ ಗೈದನೀಶ ನೆಂಪಂಚೆನ್ನಂ ॥ ೩೪

(ಚಂಪಕಮಾಲಾವೃತ್ತ)

ಪರಶಿವರೂಪಕಾಣುತಭಿವಂದಿಸಿಪಾದದೆ ಬೀಳ್ದುಶೋಕದಿಂ ।
ಪೊರಳುತನಾಮವಂಜಪಿಸುತಂ ಮಿಗೆಚೀರುತಬೀಳುತೇಳುತಂ
ಹರನಿಗೆವಂದಿಸುತ್ತ ಪರಿತಾಪದಿಸುಯ್ಯುವ ಭೂಮಿನಾರಿಯಾ ।
ಪರಿಭವ ವೀಕ್ಷಿಸುತ್ತ ಸುರಸಂತತಿ ದೇಹದೆಗಾರುಗೊಂಡಿತು ।
ಬಸವನದೆನ್ನ ಕಾಯಸುಡಲೆನ್ನುತ ಭೂಮಿಯಮೇಲೆ ಬಂದನೋ ।
ಶಶಧರಮೌಳಿ ನೀಂಪರಮತ್ವಾಪ್ತಿಕ್ಕೊಲ್ಲಲು ನಿನ್ನಧರ್ಮವಂ ।
ವಸುಧೆಗೆಕೊಟ್ಟೆಯೋ । ಕರಿಣಶೃಂಗದ ಘಾಶಿಯ ಪೇಳಲಪ್ಪುದೇ ।
ಕಶಿವಿಸಿಗೊಂಡೆನೆನ್ನಗಿದಪೂರ್ಣವಪ್ಪುದೆಂದಿಗೆ ಪೇಳುಶಂಕರಾ । ೩೬

(ಕಂದಪದ್ಯ)

ಘನತಾಪದಿ ಬಸವನಪದ ।
ದನುಭವಮಂ ಪೇಳ್ದು ಶೋಕಗೈಯಲ್ಹಾಮೇ ।
ದಿನಿನಾರಿಗಭವ ಪೇಳಿದ ।
ನೆನಗಿದುದುಸ್ಸಾಧ್ಯಬಾಲೆ ಬಸವನಕ್ರೋಧಂ । ೩೭

ಬಸವರ ಸೆನ್ನಯದೇವಂ ।
ಬಸವಂ ಬಹು-ಭಾಗ್ಯನೆನಗೆಶಾತಂ ದಾತಂ ।
ಬಸವಂ ಬಂಧುವು ಬಳಗಂ ।
ಬಸವಂ ಗುರುದೇವನೆನಗೆ ಕೇಳೆಲೆಮುಗಳೇ । ೩೮
ಹರಮುನಿದರೆ ಗುರುಕಾಯ್ವಂ ।
ಗುರುಮುನಿಯಲು ಕಾಯಲಾರಿಗಾಗದು ಮನದೊ
ಳರಿನೀಂ ನಂದಿಯಕರ್ಕಶ ।
ದುರಿಯಂ ಮಾಣಿಸುವದಾಗದೆಂದಂ ಗಿರಿಶಂ । ೩೯

## ವಚನ

ಇಂತೆಂದು ಮಾದೇವಂ ನುಡಿಯಲಾಕರ್ಣಿಸಿ ಭೂಲಲನೆ ತಾಪದೊ
ಳ್ಕಡಂಗಿ ಶೂಲಿಯಂ ಜರೆಯುತಿಂತೆಂದಳ್ । ೪೦

[ಉತ್ಪಲಮಾಲಾವೃತ್ತ]

ಬಿಟ್ಟನೆದೇವಭಕ್ತತತಿವತ್ಸಲನೆಂಬುವ ಪೂರ್ಣನಾಮಮಂ
ಕೊಟ್ಟನೆ ನಂದಿಯುಗ್ರಹತಿಗೆನ್ನಯ ದೇಹದ ಸಂಚಕಾರಮಂ
ನೆಟ್ಟನೆಬಂದೆನೇಕೆ ಲಯಚಿಂತಕನಲ್ಲಿಗೆ ದೂರುಪೇಳಲು
ಕೆಟ್ಟನುಮಾಡಲೇಂಬಸವ ಘಾತಕೆ ಹಿಂಚಿಕೆಯಂದಳಾವಧು
ತನ್ನಯಬಾಲನಾಸ್ಯವನು ಶೂಲದಿ ಛೇದಿಸಿದಾತ ನೋಳ್ಪನೇ ।
ನೆನ್ನಯಕಷ್ಟಮಂ ಮುಳಿದುಮಾವನಕೊಲ್ಲಿಸಿ ಮೋದತಾಳ್ದನೋ
ಳುನ್ನತ ಶೀಲಮಿರ್ದಪುದೆ ನಂಜನುಕಂಠದಿ ಪೊಂದಿದೇಹದೊ
ಳ್ಮನ್ನಿನ ಬುದ್ಧಿಯಂ ತೊರೆದು ಮಬ್ಬಿನೊಳಿರ್ದಪಗೇಕೆಪೇಳಿದೆ । ೪೧

(ಕಂದಪದ್ಯ)

ತಾಪದ ಭರದಿಂ ಶಿವನಂ ।
ಕೋಪದಿಜೆರೆಯುತ್ತ ಭೂಮಿಯುವತಿಯುಚೀರ
ಲ್ಕೋಪಿತನಾಗದೆ ವಿನಯದಿ
ಶ್ರೀಪತಿಸಖ ಪೇಳ್ದನಾಗ ಕಾರುಣ್ಯದಲಿಂ ॥ ೪೨

ಎಲೆಮಗಳೆ ಬಳಲಬೇಡಾ
ಮಲಹರನನು ತಾಪಸಾಶ ಪದನವಪೇಳ್ವೆಂ
ಕಲುಷವಿದೂರಂ ತಪದು
ಜ್ವಲಕಾರನಗಸ್ತ್ಯನಲ್ಲಿ ಪ್ರೋಪುದುಬೇಗಂ ।। ೪೪
ಅಮಹಿಮರ ಪದಕಾಣುತ
ನೇಮದಿನೇಳ್ಕ್ರನವ ತಾಪಸಯದಿಂ ಬೀಳ್ದಂ
ಪ್ರೇಮದಿನಿನ್ನ ಮಯಶಮಂ ।
ಧೂಮವ ಮಾಡುವನಗಸ್ತ್ಯಸತ್ಯಂ ಬಾಲೆ ।। ೪೫

## — ವಚನ —

ಇಂತಾಶಂಕರಂ ಕಾರುಣ್ಯದಿಂದಗಸ್ತ್ಯರಲ್ಲಿ ಪ್ರೋಗೆಂದು ನೇಮಿಸಲ್ಕಾ ಕಾಂತೆ ಯತಿಪಸ್ಥನವನದಿಂ ಮಹಾತಾಪಟಂ ಪಿನ್ನನಮಂಗೈದಳ್ । ೪೬

## ಕಂದಪದ್ಯ

ಹೇದೇವನೆ ನಿನಗಸದಳ
ಮಾದೀ ಘನತಾಪ ಮುನಿಯದರ್ಶನದಿಂತಾಂ
ಛೇದನವಾಗುವದೆಂತ್ರೈ
ಮೋದದಿಪೇಳೆನಗೆ ಮನದ ಸಂಶಯಕಳೆಯ್ವೈ । ೪೭
ಧರೆಯೊಳ್ಮರೆಯುವ ಘನತರ
ಗಿರಿಶಿಖರಾಗ್ರದಲಿ ತೋರ್ದಲಿಂಗಗಳೆಲ್ಲಂ
ಬೆರೆತಿಹನಿಮ್ಮೀದೇಹದಿ
ಪರಿಹರಮಂ ಕಾಣದನ್ಯರಿಂತಾನಹುದೆ । ೪೮

## ವಚನ

ಇಂತುಮಲ್ಲಿಪೆ ಆನಾರಿಯುಭವನಂ ನನ್ನುಮುಖದಿಂ ನೋಡುತಂ
ಮತ್ತಿಂತೆಂದಳ್ । ೪೯

## (ಉತ್ಪಲಮಾಲಾವೃತ್ತ)

ನಿನ್ನೊಳುಪುಟ್ಟಿತೀವ ಸುಧೆಯುನ್ನತ ಶೈಲಪುರಂಗಳೆಲ್ಲವು
ಚನ್ನಿಗದೇವಭೂಮಿಯಲಿತಾಂ ಜನಿಸಿರ್ಪುದು ವೃತ್ತಿಕಾಚಯಂ
ನನ್ನಿಯೊಳಂ ಹದಂಗೊಳಿಸಿ ಮಾಳ್ಪರು ಮಣ್ಣಿನ ಕುಂಭಮೆಲ್ಲಮಂ
ಭಿನ್ನಸು ಕುಂಭದಿಂಜನಿಸಿ ಬಂದವನಿನ್ನನು ಮೀರಿತೋರ್ದನೇ । ೫೦

## (ಕಂದಪದ್ಯ)

ಜವದಿಂದೆನ್ನಂ ಕಳುಹಲ್
ನೆವಮಂನೀಂ ತೋರಿಸಲ್ಕೆ ಪೇಳುವೆಯಕಟಾ
ಭವಣಿಯು ತೊಲಗುವಕೃತ್ಯದ
ಹವಣವನೆರೆದೋರುದೇವ ಬೇಗದೊಳೆಂದಳ್ । ೫೧

ಪರಿಪರಿಸಂಕಟ ಬಡುತಿಹೆ
ಕರುಣವು ನಿನಗಿನಿತು ಬಾರದೇನ ಘಹರನೇ
ಧರಿಸುತಲುರಗವ ದೇಹದೆ
ಗರಳದ ರೂಪಾದೆ ದೇವನೀನೆನಗೆಂದಳ್ । ೫೨

ವರಶಂಖ ದಂಡಿನಿನ್ನಂ
ಬಿರುಗಲ್ಲಿಂ ಪೊಯ್ಯಲವಗೆಗಣಪದವಿತ್ತೇ
ಧುರದೊಳ್ಮಾದಲ್ವಿ ಜಯಗೆ
ವರಮಂನೀಂ ಪಾಲಿಸಿದೆಯೊ ದೇವರದೇವಾ ॥ ೫೩

ಪಾದದೊಳೊದೆಯಲ್ಕಣ್ಣಗೆ
ಮೇದಿನಿಯೊಳ್ಸತ್ಯರೂಪು ದೋರಿದೆಯಕಟಾ
ಬಾಧೆಯ ತಾಳ್ದಿರ್ಪೆನುನಾಂ
ಛೇದಿಸುಕಷ್ಟವನು ದೇವನೀದಯದಿಂದಂ ॥ ೫೪

## ವಚನ

ಇಂತಾತಾಪದೊಳ್ಕಡಂಗಿ ಶಂಕರನಂ ಕೇಳಲಾಗಿರಿಜಾಧವಂ
ವಿನಯದಿಂದಿಂತೆಂದಂ

( ಕಂದಪದ್ಯ )

ಏನಿದು ನಿನ್ನವಿಚಾರಂ
ಮಾನಿನಿಮಣಿ ಕೇಳಗಸ್ತ್ಯರುಷಿಯುದಯವದುಂ
ತಾನೆಯೆಕುಂಭದೆಯಾಗಲು
ನ್ಯೂನತೆಯೇಂ ಪೇಳುನಿನಗೆ ಮಾನ್ಯನಗಸ್ತ್ಯಂ ‖ ೫೬

ಭೂಮಿಯು ಪುಟ್ಟಿತುಶಿವನಿಂ
ಭೂಮಿಯೊಳಂ ಮಣ್ಣುಪುಟ್ಟಿಕುಂಭಮದಾಯ್ತು
ಭಾಮೆಯೆಕುಂಭಜನಿಂದಘ
ತಾಮಾಣದಿದೆಂದು ಸಂದೆಗಂ ಬಡಬೇಡಾ ‖ ೫೭

ಮುನಿಮೂಲ ವನಾಲೋಕಿಸಿ
ಮನದೊಳ್ನೋಡಿದರೆ ನರಕಮಪ್ಪುದುಸಿದ್ಧಂ
ಘನತರನೀತಿಯುವಚನಗ
ಳನುನಯದಿಂ ನುಡಿವನದಕೆ ಸಂದೆಗಬೇಡಾ ‖ ೫೮

(ಉತ್ಪಲಮಾಲಾವೃತ್ತ)

ನೀನರಿಯೆನ್ನ ಭಕ್ತರಿರವನ್ನಭಿವರ್ಣಿಪುದಾಗದೆನ್ನೊಳುಂ
ಮಾನಿನಿದೇವನಿಂದಮಧಿಕಂ ಶಿವಭಕ್ತರು ಸರ್ವಕಾಲದೊಳ್
ದೀನರ ರಕ್ಷೆಮಾಳ್ಪರದರಿಂಬಗೆ ಸಂದೆಗವಾಣ್ದು ಪೋಗುನೀ
ನಿನ್ನೆಯದುಃಖ ನಾಶಿತಮದಪ್ಪುಹು ಮಾಣ್ಮನದೀವಿಚ್ಛಾರಮಂ । ೫೯

(ಕಂದಪದ್ಯ)

ದೇವನೆ ಪೃಥ್ವಿಗೆಯಧಿಕಂ
ದೇವನೊಳೀ ಸಕಲಜಂತು ಪುಟ್ಟಿಹವೆಂದುಂ
ಭಾವಿಸಿ ಪೇಳಿದೆ ಬಾಲೆಯೆ
ಕೋವಿದಶಿವಭಕ್ತರಿರವ ನೀನರಿಯುಂದಂ । ೬೦

(ಮತ್ತೇಭವಿಕ್ರೀಡಿತವೃತ್ತ)

ನಯಸಕ್ತೀಮಹಿ ಸರ್ವವಸ್ತುಗಳೊಳುಂ ಮೇಲಿರ್ಪುದೀಪೃಥ್ವಿಯಂ
ಭಯಮಂತಾಳದೆ ಪೊತ್ತಶೇಷನ ವನಂಪರ್ಯಂಕದೊಳ್ವಾಸಿಪಂ
ಗಯನಾರಾತಿಯದಾತನಕ್ಷಿಯನುತಾಂ ಪಾದಾಗ್ರಕಿಟ್ಟಂ ನಿರಾ
ಮಯನಾದೇವನ ತನ್ನಹೃತ್ಕಮಲದೊಳ್ತಾಳಿರ್ದ ನಾಭಕ್ತನು ॥ ೬೧

(ಕಂದಪದ್ಯ)

ಇಂತಹ ಶಿವಭಕ್ತರಮನ
ದಂಪರವನ್ನೇನು ಬಲ್ಲೆ ಕೇಳೆಲಿಮಗಳೇ
ಚಿಂತೆಯ ಬಿಡುಮುನಿಗಳ ಮಹಿ
ಮಾಂತರಮಂ ಪೇಳ್ವೆನೆಂದ ಕಾಳೀನಾಥಂ । ೬೨

(ಮತ್ತೇಭವಿಕ್ರೀಡಿತವೃತ್ತ)

ಕರದರ್ಭಾಗ್ರದೆ ತಾನದೆಳ್ತಿದ ವಸಿಷ್ಠಂಭೂಮಿಯಂ ದರ್ಪದಿಂ
ವರಮೌನೀಮಣಿಕಾಶಿಕಂ ಛಲವನೆನ್ನೊಳ್ಮಾಡಿತ್ರೈನೇತ್ರದಾ
ನರರಂಪುಟ್ಟಿಸಿ ತೋರಲಿಲ್ಲವೆ ಸುಮಾರ್ಕಾಂಡೇಯ ಸದ್ಭಾವದಿಂ
ಬರೆದಾಯುಷ್ಯವ ಮೀರಲಿಲ್ಲವೆ ಮಹಾ ಸದ್ಭಕ್ತರಂ ಪೋಲ್ವೆನೇ । ೬೩
ಆದರಿಂ ಸನ್ಮುನಿಸಂಚಯಂ ದುರಿತಮಂ ಪಾಳ್ಮಾಡುತಿರ್ಕುಂಸದಾ
ಮದನಾರಾತಿಯ ಧ್ಯಾನಗೊಂಡು ನಿರುತಂಕುಂ ಭಾತ್ಮಜಂಬಾಳ್ವತಾ
ನಿದನೀಂ । ಕೇಳೆಲೆಬಾಲೆಯೊಮ್ಮೆ ಮುನಿಸಿಂಸಪ್ತಾಬ್ಧಿಯಂ ಪೀರ್ದ್ದನೇ
ಜಡತಾಮೂತ್ರವಮಾಡಿಬಟ್ಟ ಮುನಿಸಂತಾನೇನು ಸಾಮಾನ್ಯನೇ । ೬೪

## ಕಂದಪದ್ಯ

ಶಿವಭಕ್ತರ ಮಹಿಮೆಯನಾ
ಜವದಿಂದು ಸುರುವಡೆಬಾಲೆ ತಾನದಸಾಧ್ಯಂ
ಅವನಿಯು ಪಾವನವಾಯಿತು
ಭವಹರವರಭಕ್ತ ಪಾದಸಂಗದೊಳೆಂದಂ । ೬೫

ಅರಿಯಲೆ ರಾಮೇಶ್ವರನೇ
ಪುರಹರಮುನಭಾವವೆಂತು ಭಕ್ತಾದಿಗಳಾ
ಸಿರಿಯಂ ಪೇಳಲುಗರ್ವದ
ಪರಿಯಂತುಸು ತೋರಲಿಲ್ಲವೆಂದಂಜೆನ್ನಂ । ೬೬

## ವಚನ

ಇಂತೆಂದು ಮಹಾದೇವಂ ಕುಂಭಾತ್ಮಜನ ಮಹಿಮೆಯಂ ಭೂದೇವಿ ಗರುಹಿತನ್ಮನಿ ಯೊಳ್ಭಕ್ತಿಯಂಕುರಿಸುವಂದದಿಂ ಮಾಡಿಮನವೊಡಂಬಡಿ ಸಲಾನಾರಿ ಯಾಯೋಗಿವರ್ಯ ಸದನಮದೆಲ್ಲಿಯದೆಂತು ಗೋಚರಿಪರೆಂದು ಕೇಳಲ್ಕದ ನಾರಿ ತಾಮುನಿಪ ರಹಸ್ಯಮಂ ತಿಳಿಸಿಕಳು ಪಲ್ಪಿಂದಿ ರುಗಿಯಾ ದೇವನಿಗಭಿವಂದಿಸಿಬಂದಳ್ । ೬೭

## ಕಂದಪದ್ಯ

ಮುನಿಪನ ಕಾಂಕ್ಷೆಯೊಳಂಮನ
ದನುತಾಪದೆ ಪೊರಟಳಾಗ ಭೂದೇವತೆತಾಂ
ಚಿನುಮಯ ಕೈಲಾಸದಸಿರಿ
ಘನಮಂ ತೊರೆಯುತ್ತ ಘೋರವಿಪಿನಾಂತರದೆ । ೬೮

ಎಲ್ಲಿಯ ಕೈಲಾಸದಸಭೆ
ಯೆಲ್ಲಿಯ ನಂದೀಶಶಯನಮೆಲ್ಲಿಯ ಕ್ರೋಧಂ
ಎಲ್ಲಿಯ ಸಂಕ್ರಂದನ ಮದ
ಮೆಲ್ಲಿಖುದೀ ತಾಪಮೆನಗೆ ಬಂದಿಹುದೆಂದಳ್ । ೬೯

ಇಲಿಯಂಕೊಲ್ಲಲ್ಕರದಿಹ
ಬಲೆಯಂ ಬಿಸುಡಲಿಕೆಯುದರ ಬಂಧನದೊಳ್ತಾ ||
ನಿಲದೇರ ಶಿಲ್ಕಿ ಬಳಲುವ
ನೆಲೆಯುಂದವೊಳಾಡೆ ನಂದಿಯುಗ್ರದಹತಿಯೊಳ್ । ೭೦
ಎಂದಿಗೆಕಾಂಬೆನು ನೇತ್ರವೆ
ನಂದಿಧ್ವಜ ಭಕ್ತಕುಂಭಸಂಭವನನುನಾ
ನೆಂದಿಗೆಶಾಂತಿಯ ತಾಳುವೆ
ನಂದಿಯುಮಹತಾಪ ನೀಗಿಮನವೊಳಗೆಂದಳ್ । ೭೧

## — ವಚನ —

ಇಂತುಪಲುಂಬುತಂ ಗಿರಿವನದುರ್ಗಂಗಳಂದಾಂಟಿ ಭೂಲಲನೆ ಬರ ಲಾಕ್ಷಣವನವೆಂಬ ಕೈಲಾಸದೊಳ್ ರುದ್ರನೀತನಹುದಹುದೆನಿಪ ಗಸ್ತ್ಯ ರಾಶ್ರಮಮಂ ಪೊಂದಿದ ಮಹಾವನಂ ಮೆರೆದುದು । ೭೨

[ಕಂದಪದ್ಯ]

ರಾಮನೆಲಾಲಿಸು ವನಮಂ
ಭೂಮೀವಧು ಕಂಡುಮನದೊಳಾಲ್ಪರಿಯುತತಾಂ
ಸ್ವಾಮಿಯು ಪೇಳಿದ ಕುರುಹಂ
ನೇಮದಿ ನೋಡುತ್ತ ಬಂದಳತಿ ವಿನಯದಲಿ । ೭೩

# ಗದ್ಯ

ಇದು ಶ್ರೀಮದ್ವೀರಶೈವಾಚಾರಧು ರೀಣಶಾಂತವೀರ ಪೇವರೊಡ ಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವಜನ್ಮ ಮಹಾ ಕಾವ್ಯದೊಳ್ಪಂಚಮಾಶ್ವಾಸಂ ಸಮಾಪ್ತಂ ಅಂತುಸಂಧಿ ಐದಕ್ಕಂ ಗದ್ಯ ಪದ್ಯಂಗಳ್ಮೂರುನೂರಾಎಪ್ಪತ್ತುಮೂರಕ್ಕಂ ಮಂಗಲಮಹಾ.

# ಃಃ ಷಷ್ಠಾಶ್ವಾಸ ಪ್ರಾರಂಭ. ಃಃ

[ಉತ್ಪಲಮಾಲಾವೃತ್ತ]

ಪುತ್ರನ ಕಾಣುತುಬ್ಬುವನನೀಂ ಟಿದನನ್ವಯ ಶ್ರೋತ್ರನಾಮನಾ
ಭ್ರಾತ್ರನ ಬೀಳು ಪೊಯ್ದುವನ ನಾಡಿಯಮುನ್ನಿನ ರೂಪವಾಸಸ
ನ್ಮಿತ್ರನ ಪುತ್ರನಂತರಿದ ನಂಗನೆಯಣ್ಣನ ಪೌತ್ರನಿಂಗೆಸ
ತ್ಪತ್ರಿಯನಿತ್ತವಂಗೊಲಿದ ಶಂಕರಪಾಲಿಪುದೆನ್ನಸಂತತಂ ॥ ೧
ಮಿತ್ರನವೋಸದಿಂ ಮಡಿದನಂಗನೆಯಣ್ಣನ ಪುತ್ರಿವಲ್ಲಭ
ಭ್ರಾತ್ರನಮಾತೆ ತಾತನಕುಮಾರನ ನುಂಗುತ ಮತ್ತುಗುಳ್ದನಂ
ಗಾತ್ರದವೋಸಮಂ ತಿಳಿದುವಶೌಳಿಯ ದೇಹವಬೇರೆಗೈದನ
ಪುತ್ರಕಪಾಲಮಂ ಪಿಡಿದುಲೀಲೆಯ ತಾಳ್ದನೆ ಪಾಲಿಸೆನ್ನನು ॥ ೨

## ವಚನ

ಆಗಳಾನಾರಿ ತಾನುಪವನದೊಳ್ಪರ್ಾಗಳ್ । ೩

[ಚಂಪಕಮಾಲಾವೃತ್ತ]

ಪರಿಪರಿ ಶೋಭೆಯಾಂತಕು ಜಸಂಕುಲ ಪಣ್ಗಳ ತೋರಣಂಗಳಿಂ
ಭರಿತಮದಾಗಿ ತೋರುತಿಹಮಂಟಪ ಪೂಗಳಗೊಂಚಲಂಗಳಿಂ
ದುರಿತವಿನಾಶಗೈವ ಮುನಿಮೌಳಿಗಳಾಗ ಮನಿಸ್ವನಂಗಳಿಂ
ಮೆರೆದಿಹುದಾವನಂ ಮುನಿಪಯೋಗದ ಬಂಧುರಸಾಧನಂಗಳಿಂ । ೪
ಹರಿಸಿಖಿಮೂಷಕಂ ವನಬಿಡಾಲವು ಮೋದದಿಕೂಡ್ಕುಮೆಲ್ದವು ॥
ಹರಿನಖದಿಂ ಮದೇಭಪದಕಂಟಕಮಂ ನೆರೆಕೀಳ್ಕಿಕೊಂಡವು ॥
ಹರಿಣದ ಪೋತಗಳ್ಪಸಿಯುತುನ್ನತ ಪೆಣ್ಬುಲಿಪಾಲನುಂಡವು ॥
ಹರಿದ್ವಗನೇತ್ರಬಿಚ್ಚಿಪಗಲೊಳ್ಪರಿದಾಡಿತುಯೋಗಿ ಪುಣ್ಯದಿ । ೫

## ವಚನ

ಅಂತುಮಲ್ಲದೆಯಾಸಾರಿ ವನವನ್ನಿರೀಕ್ಷಿಸೆ । ೬

### ( ಉತ್ಪಲ ಮಾಲಾವೃತ್ತ )

ವೇದಪುಶಾಸ್ತ್ರಪ್ರೋದುತಿಹಪುಷ್ಪಫಲಂಗಳತೀವಿತರ್ಪಪ
ಪ್ಟ್ರೋಧೆಯತಾಳ್ದ ಬಾಲಸಮುದಾಯದೆಯಜ್ಞತಪಾದಿ ಕಾಲಮಂ
ಸಾಧಿಪಸೂರ್ಯರ್ವಂದನೆಹರೀಶ್ವರರರ್ಚಿಪರಿಂಸುಘೋಷದಾ
ರಾಧನೆಯಿಂ ಸುರಂಜಿತದೆ ತೋರಿಡುದಾವನ ನಾರಿನೇತ್ರಕೆ । ೭
ಭೇಧವಕಾಣವಾರು ಋತುಗಳ್ವನದೊಳ್ಮುನಿವಾಸದಿಂದೆತಾಂ
ನಾದವುಶಂಭುಶಂಕರನ ಧ್ಯಾನದೆತುಂಬಿದವಾಗಕರ್ಣಗಳ್
ಛೇದನವಾಯ್ತು ಭೂಲಲನೆಗಾಗಳೆ ಬಂದಿಹತಾಪಬಾಧೆತಾ
ನಾಧನಮಿತ್ರಬೋಧೆಯಲಿಬಂದುದು ಪುಣ್ಯಮದೆಂದು ನೋಡ್ದಳು । ೮

### (ಚಂಪಕಮಾಲಾವೃತ್ತ)

ಅಡಿಗಡಿಗಾಗಬಾಲೆಮನ ತೋಷದೆಕಂಡಳು ಯಜ್ಞಕುಂಡಮಿಂ
ಬಿಡಿದಿಹಚಿತ್ರಪತ್ರಗಳ ಪೂರ್ಣಲತಾಗೃಹದಿರ್ಪಮೌನಿಪರ್
ಮಡದಿಯ ಚಲ್ವನಾರಮಡಿಯಿಂದಲಿ ಶೋಭಿಸುವಂಗರೀತಿಯು
ನ್ನಡವಿಡದೀಕ್ಷಿಸುತ್ತ ಕಡುವೇಗದಿಬಂದಳು ಮೌನಿಪೀಠಕೆ । ೯

### (ಕಂದಪದ್ಯ)

ಕಡುತಪದಿಂ ಮೆರೆಯುವಮುನಿ
ಧೃಡವನಮಂ ಮುಟ್ಟದಿರ್ಪುದೀ ಮಹದಸಲಂ
ಪೊಡವಿಗೆ ಯಿಷ್ಟರಿಯಂದಳ್
ಕಡುಮುದದಿಂ ಭೂಮಿಕಾಂತೆಯದತಾಂ ನೋಡಿ । ೧೦

ಆಲಿಸುರಾಮನೆ ಲಲನೆಯು
ತಾಳಿದಳತಿಮೋದಮುನಿಯ ಸಾಕಾರವತಾ
ನಾಲೋಕಿಸು ತೆಂದಳ್ನಾಂ
ಕಾಲಾರಿಯು ಕೃಪೆಯೊಳಿಂಥ ಮುನಿಯುಂ ಕಂಡೆ ೧೧
ಹಿಂದಿನ ಜನ್ಮದಪುಣ್ಯಂ
ಬಂದೆನಗೀ ಪೂಜ್ಯಪಾದದರ್ಶನಮಾಯ್ತು
ನಂದಿಯತಾ ಪವನಳಿಯುವ
ಬಂಧುರಮುನಿತಾನಗಸ್ತ್ಯನಹುದಲ್ಲೆಂದಳ್ ೧೨

## (ಮತ್ತೇಭವಿಕ್ರೀಡಿತವೃತ್ತ)

ದಹನಂದೋರದವನ್ನಿಯೋ ಬಿಸಿಲತಾಂ ಮಾಜಿರ್ದ ಮಾರ್ತಾಂಡತಾ
ನಿಹನೋ ಚಂದ್ರಿಕೆ ದೋರದಿರ್ದಶಸಿಯೋ ಫಾಲಾಕ್ಷಿತಾನಿಲ್ಲದೆ
ಗುಹತಾತಂ ನೆರೆದೋರ್ವನೋ ಕರದಚಕ್ರಂ ಮಾಣ್ದ ಶ್ರೀಕಾಂತನೋ
ಮಹಿಮಾವಂತನಗಸ್ತ್ಯನೋಯನುತ ತಾನಾಶ್ಚರ್ಯಮಂತಾಳ್ದಳು । ೧೩
ಕವಿಭೂಜಾದಿ ಗ್ರಹಂಗಳಾದರವರೀ ತಾಣಕ್ಕೆ ತಾವ್ಬರ್ಪರೆ
ಭವದೊಳ್ಪುಟ್ಟುತಬಂದುಶಕ್ರನವನೀಸ್ಥಾನ ಸ್ಥನಾಗಿರ್ದರಾ
ಶಿವನಿತ್ತಾಜ್ಞೆಯುವ್ಯರ್ಥಮಪ್ಪುದಿದುರಾಜಸ್ಥಾನವಲ್ಲದ್ದರಿಂ
ನೆವಗಾಣೇಂ ಮರುಮಾತಿಗಿಲ್ಲಿಯಿವತಾಂಕುಂಭೋದ್ಭವಂನಿಶ್ಚಿತಂ । ೧೪

## ಕಂದಪದ್ಯ

ಮುನಿಪನಸದಮಲಪಾದಕೆ
ವಿನಯದೆಬೀಳುತ್ತ ಮನದೊಳುರುತರದಿಂಸಂ
ಜನಿಸಿದತಾಪವತಾನಭಿ
ಮಾನವ ಬಿಟ್ಟೊರೆದಳಾಗಲೆಲೆ ಸಿದ್ಧೇಶ । ೧೫

ಇನಿತಾ ಕ್ರೋಶದ ಲಲನೆಯು
ಘನಬಸವನ ರೋಷದನಲದ ಹಿಸುವದೆನ್ನಂ
ಮುನಿಮೌಳಿಯೆ ಪಾಲಿಪುದೀ
ಯನುಭವವನ್ನೇನುಪೇಳಲೆಂದೆರಗಿದಳು । ೧೬

ರಕ್ಷಿಸುಬೇಗ ದೊಳೆನ್ನಂ
ಲಕ್ಷಿಸುನೀ ತಾಪವನ್ನು ಜ್ಞಾನೇಕ್ಷಣದಿಂ
ಶಿಕ್ಷಣರಕ್ಷಣಕರ್ತನೆ
ಮೋಕ್ಷಾಲಯ ನಂದಿಕಷ್ಟಮಂ ಪರಿಹರಿಸೈ ॥ ೧೭

ಎಲೆಮುನಿಪ ನಿನ್ನ ಸದಮಲ
ನೆಲೆಯಂ ತುಸು ತೋರುನೋಡು ನೇತ್ರವತೆರೆನೀಂ
ಮಲಹರ ಕಳುಹಿದನೆನ್ನಂ
ಛಲಬೇಡೆನ್ನೊಳಗೆ ದೇವರಕ್ಷಿಪುದೆಂದಳ್ । ೧೮

## ವಚನ

ಇಂತುಪಲುಂಬುತಂ ನೆಲವೆಣ್ಣತಾಂ ಬಲವಾದನಿಸ್ವನಮಂ ತೋರಿ ಪಾದದೊಳ್ಪೊರಳುತಂ ದೈನ್ಯದಿಂ ಪ್ರಾರ್ಥಿಸುತ್ತಿರ್ಪಾಗಯತಿ ತತ ಚಕ್ರವರ್ತಿ ವಿಲಸತ್ಕೀರ್ತಿಯು ವಿರಳಪರಮಮೂರ್ತಿ ಯಗಸ್ತ್ಯರಾಗಕಣ್ದೆರೆದು ನೋಡಿರ್ಗೆ

[ಮತ್ತೇಭವಿಕ್ರೀಡಿತವೃತ್ತ]

ಎಲೆ ತಾಯೇ ಬಿಡುಶೋಕಮಂ ತಿಳಿಸುನಿನ್ನಾವಾಸಮೆಲ್ಲಿರ್ಪುದಾ
ಬಲುದುಃಖಾರ್ತರ ನೋಡಿಮೌನಿಪನಗಸ್ತ್ಯಂ ತಾಸೈರಿಸಂ ತಾಪಮಂ
ಸಲುಹೆಂದಾಡುವೆ ಪಾದಕಿಟ್ಟುಶಿರಮಂ ತಾನೆಂಥ ಸಂತಾಪವಾ
ನೆಲೆಯಂ ಪೇಳಲದೆನ್ನ ಸಾಹಸಫಲಂ ತಾಮಾಳ್ಪುದಾನಂದಮಂ । ೨೦

## ವಚನ

ಅಂದುಮುನಿರಾಯಂ ತಪೋವನದಮಹಿಮೆಯಂ ಪೇಳ್ದಂ । ೨೧

(ಕಂದಪದ್ಯ)

ಸನ್ನುತದ ತಪೋವನದೊಳ
ಗುನ್ನತ ಶೋಕವನು ಕಂಡೆನೆಂತಿದಗಾಧಂ
ಬನ್ನವಬಿಡುಮಾತೆಯೆನಿನ
ಗಿನ್ನುಳಿಯಲು ಶಕ್ಯಮಿಲ್ಲ ಮನದನುತಾಪಂ । ೨೨

ಪೇಳೌಬಂದಿಹಹದನವ
ಕಾಳೀಶನು ನಾಶಗೈವಬಿಡುದುಃಖವನೀಂ
ಹಾಳಾದ ದೇಹದೀಸ್ಥಿತಿ
ಗೋಳಾಟ ಮದೇನುದೇವಿಯೆಂದಂ ಮುನಿಪಂ । ೨೩

ಇಂತೆಂದು ಕೇಳಿಮುನಿವರ
ಸಂತಸದಿಂ ಪೇಳ್ದಳಾಗ ಭೂಕಾಂತೆಯುತಾ
ನಂತಕನಂದದ ನಂದಿಯು
ತಾಂತಳೆದಿಹ ರೋಷವನ್ನು ಮುನಿಸಮ್ಮುಖದೊಳ್ । ೨೪

( ಉತ್ಪಲ ಮಾಲಾವೃತ್ತ )

ಮೌನಿಯೆಕೇಳುನೀಂ ಶಯನಮಂ ಗೊಳೆನಂದಿಯುಶಂಭುಪಾವದೊ
ಳ್ತಾನೆಯೆ ಕೋಪಮಾಂತುಮುದದಿಂ ಸುರನಾಥನು ಕೇಳ್ದರೋಮಮಂ
ಮಾನಿಯು ಪೋದನಾಗ ಘನಕಾನನ ದೊಳ್ತಪಕಾಗಿ ರೋಷದಿಂ
ತಾನಯವಾಣಿಯಳ್ದುದಿವಪಂ ಬಲದೋರಲು ಶ್ಯಾಪಪೊಂದಿದಂ । ೨೫

ಭೂಮಿಗೆ ಪುಟ್ಟಿಬಂದನದು ಪೋಗಲಿಮುಂದೆ ಸುನಂದಿಯುಗ್ರದಿಂ
ತಾಮಸವಾಂತನಿರ್ಜರರ ಸೋಲಿಸಿ ತನ್ನ ಬಿಯಂಥ ಶೃಂಗದಿಂ
ಭೂಮಿಯ ಚಿಮ್ಮಿಪಾದದಲಿ ತೋರಿದಸಪ್ತ ಮಹಾರ್ಣವೆಲ್ಲವಂ
ಸೋಮಧರಂಗೆ ಪೇಳ್ದೆನಿದನಾಶವಗೈಯಲಶಕ್ಯವೆಂದನು । ೨೬

( ಕಂದಪದ್ಯ )

ಮುನಿವರ ಬಸವನತಾಪವ
ಚಿನುವಯುತಾಂ ನಾಶಗೈವುದ ಸದಳವೆನುತಂ

ಮನನಿಶ್ಚಯ ಮೊರೆಸುಲುನಾಂ
ಘನಕಾರ್ಯ ಮದಲ್ಲವೆನಲುದೇವಂ ಪೇಳ್ದಂ । ೨೭
ನೀಗುವವಲ್ಲೆನಗಬಲೆಯೆ
ಯೋಗಿಯತಾಪವನು ನಾಶಗೈವುದುತಾನೆಂ
ದಾಗಿರಿನಂದನೆ ಯಾಣ್ಮಂ
ನಾಗುವಪೊಳಿತೀಗ ಯೋಗಿಯಾಶ್ರಮಕೆಂದಂ ೨೮
ಆನುಡಿಗೇಳುತಲಾನುಂ
ಹೀನಳುಬಂದದ್ದು ತಪ್ಪುಪೋಗುವೆನೆನೆತಾ
ವಾಣೀಶ ಶಿರವಿನಾಶಕ
ಕ್ಷೋಣಿಯೊಳಂ ನಿನ್ನಪಾದದಡಿಪೋಗೆಂದಂ । ೨೯
ಆದರಿಂಬಂಧೆನು ಯತಿಪನೆ
ಮದನಾರಿಯ ವಾಕ್ಯಸತ್ಯನೀ ಜಗದೀಶಂ
ಸದಮಲಕೀರ್ತಿ ವಿಶಾಲಂ
ಮುದಮಾಂತೆಂ ನಿನ್ನ ಪಾದದರ್ಶನದಿಂನಾಂ ೩೦
ಭೂದೇವಿಯ ನುಡಿಗೇಳುತ
ತಾದ್ವೈನ್ಯದಿ ಪೇಳ್ದ ಯತಿಯ ದೆಂತಿದುಚಿತ್ರಂ
ಶ್ರೀದೇವಿಯ ಪತಿಯಕ್ಷಿಯ
ತಾಧಾರಣಗೈದಶಂಭುಗಾಂ ಪಿರಿದಿಹೆನೆ । ೩೧
ತಾಮಾಡದೆನಿನ್ನೊಳುತಾ
ನೀಮಾತನು ಪೇಳ್ದನಕಟಗೌರೀವರನಾ
ಪ್ರೇಮದವರ್ಣನೆಯದುತಾಂ
ಭೂಮಿಯಪೊತ್ತವನಿಗರಿದುನಾನೇಂ ಬಲ್ಲೆಂ ॥ ೩೨
ಎಂತೆಂದು ಮುನಿಪಪೇಳಿದ
ನಂತಕ ನಾಶಕನ ಮಹಿಮೆಯಾಕ್ಷಣದೊಳ್ಬಾ

ಕಾಂತೆಗೆ ವಿನಯದ ನುಡಿಯಿಂ
ಸಂತಸದಿಂ ಕೇಳ್ಪುದೀಗಲೆಲೆ ರಾಮೇಶ || ೩೩
ಯೋಗಿಯ ಶಾಪದದುಃಖವ
ನೀಗಿಸಿಫಲಕೊಡಲಸಾಧ್ಯ ಮೆಂದನೆ ಕೇಳಾ
ಜೋಗಿಯುು ಪಿಂದಕೆಮಾಡಿಹ
ಯೋಗಿಪರಿಗೆಯಧಿಕ ಸೌಖ್ಯಮದನಾಂ ಪೇಳ್ವೆಂ || ೩೪

## ವಚನ

ಆಗಳಾಮುನಿಮೌಳಿಯಗಸ್ತ್ಯಂ ಭಾವೆಯೊಳಭವ ಸಾಮರ್ಥ್ಯವಂ ನಿರೂಪಿಸಿದಂ | ೩೫

(ಮತ್ತೇಭವಿಕ್ರೀಡಿತವೃತ್ತ)

ಯತಿದುರ್ವಾಸರ ಶಾಪದಿಂದಳಿಯೆತನ್ನೈಶ್ವರ್ಯಮೆಲ್ಲಂ ಮಹಾ
ಗತಿಗೆಟ್ಟೆಂದ್ರನು ದೂರಲಾಗಿ ಶಿವತಾನಂಬೋಧಿಯಂ ಮಂಥಿಸಿ
ಗತಸಾಮಗ್ರಿಯ ನೀಡಲಿಲ್ಲವೆ ಸುಕಾಸೀಕ್ಷೇತ್ರದೊಳ್ವ್ಯಾಸತಾ
ನುತಿಸಲ್ಕಾತನ ಹಸ್ತಬಂಧನವದೇವಂ ಮುಕ್ತಗೈದಿಲ್ಲವೆ | ೩೬
ಮುನಿಯುದ್ದಾಲಕ ಪುತ್ರರಿಲ್ಲದೆಫಲಂ ತಾನಾಗದೆಂದಂಜುತಂ
ತನುವಂದೇವನಪಾದಕಿಟ್ಟು ನಮಿಸಲ್ಕೊಂದಾಗಿ ಸತ್ಪುತ್ರನಂ
ವನಿತಾರತ್ನವಪಿಂದಿನಿಂದೆರೆದ ಪಾರ್ಥಂ ತಪೋಜ್ವಾಲೆಯಿಂ
ಮುನಿಸಂತಾನಕೆಭೀತಿ ದೋರಲಳಿದಂತಾಶಂಭು ಸಾಮಾನ್ಯನೇ | ೩೭

(ಕಂದಪದ್ಯ)

ಇಂತಹಶಂಕರನಿರವಂ
ಚಿಂತಿಸುವಡೆ ತಾನದಳವೆ ಮಾತೆಯೆ ನೀಕೇಳ್
ಕಂತುವಿನಂದಹಿಸುತಮೋ
ಕ್ಕಾಂತೆಗೆಯರೆವ್ಮೈಯನಿತ್ತನೆಂತಿದುಚಿತ್ರಂ | ೩೮

ಈಪರಿಯಲಿ ಮುನಿಪಾಲಂ
ಕಾಪಾಲಿಯ ಮಹಿಮೆಯನ್ನು ಬಣ್ಣಿಸುತಿರೆತಾ
ತಾಪಸವರ ನೊಳ್ನುಡಿದಳ್
ನೀಪಾಲಿಸುಪೇಳ್ವೆಯತಿಪಮನ ದುಗುಡವನು । ೩೯

ಅವರಂ ಕೇಳಲ್ನಿಮ್ಮಂ
ತವಕದಿಮೇಲ್ಮಾಡಿಪೇಳ್ವರಂತೆಯೆನಿಮ್ಮಂ
ಜವದೊಳ್ಕೇಳಲ್ಕವರಂ
ಸವಿದೋರುವಿರಿದಕೆ ಮೇಲುನಾನಾರೆಂಬೆಂ ॥ ೪೦

ಆರಾದರಾಗಲೆನ್ನಯ
ಘೋರಾಟದಿಮುಕ್ತಮಪ್ಪ ತೆರಗೈವುದುನೀವ್
ಆರಾದೆತಾಪದಲಿನಾ
ಸಾರಿಯಜನ್ಮವದುಕಷ್ಟಜೀವಿತಮೆಂದಳ್ ॥ ೪೧

ಶೋಕದೆಬಳಲುವ ಲಲನೆಗೆ
ತಾಕರುಣದಿಂದಳೆದು ಪೇಳ್ದಮುನಿವರ್ಯನುಕೇಳ್
ಭೂಕಾಂತೆ ಮಾನ್ಯರೆಲ್ಲರ್
ನೂಕಿಪರೌಮನದಗರ್ವದ ಜ್ಞಾನವನು । ೪೨

ಇಂತಹಮಹಿಮರು ಮದಮಂ
ಸಂತಸದಿಂ ಭಸ್ಮಗೈವರತಿವಿನಯದೆನೀಂ
ಮುಂತಿಹಚರಿತವಕೇಳೆಲೆ
ಕಂತುವಿನಾರಾತಿ ಭಕ್ತರಾಮೇಶ್ವರನೇ । ೪೩

## ವಚನ

ಅಂದಾಮುನಿಪಂಭೂದೇವಿಯೊಳ್ಮತ್ತಂ ಬೆಸಗೊಂಡಂ

[ಚಂಪಕಮಾಲಾವೃತ್ತ]

ಮದನನ ವೈರಿತನ್ನಸದುಭಕ್ತರಕಾಂತಿಯನೋಡಲೋಸುಗಂ
ಹೃದಯದವಾಸಮಾಗಿಯವರಿಂ ನೆರೆನೂಡಿಪನೆಲ್ಲ ಕಾರ್ಯಮ

ನ್ನದರಂಪೋಲೆನ್ನದೇಹದಲ್ಲಿ ವಾಸಿಸಿತಾ ಬಸವೇಶಕೋಪದಿಂ
ದುದಯಿಸಿತ್ತೋರ್ಪ ಬಾಧೆಯುಳಿಪಂ ಬಿಡುಶೋಕವನೆಂದನಾಮುನೀ ‖ ೪೫

ಜಗವಾತೀಬಹುಮಾನ್ಯ ಶಂಕರಮೊದಲ್ಕಾನೊರ್ಮೆಯಾದೇವಸ
ದ್ವಗಕಾರುಣ್ಯದಲೀಂಟಿದೆಂ ತರುಳೆಕೇಳ್ಸಪ್ತಾಬ್ಧಿಯನ್ನಂತೆಯೇ
ನಿಗಮಾತೀತನಪಾದದಿಂದುದಯಿಸೀ ಲೋಕಂಗಳಂ ಪೂಜಿನಿ
ರ್ಜಗಪೂಪ್ಪೀಜಲಪಾಳುಗ್ಗೈವನೆನುತಂತಾಂಬಿಟ್ಟನಿನ್ನಿಲ್ಲಿಗೆ ‖ ೪೬

ಅದುನಾಂ ಪಾಳನುಗ್ಗೈವುದೆತ್ತಬಿಡುನೀಂ ಮೂಲೋಕಸದ್ವೀರರಿಂ
ದದುತಾನಾಶವಪೊಂದಲಾರದರಿನೀಂ ನಂದೀಶ ನಮ್ಮೆಲ್ಲರೊಳ್
ಸದರಂದೋರನು ದೇವಭಕ್ತನೆದಿರೊಳ್ಮೇಣೊಬ್ಬ ತಾನಿಲ್ಲನೇ
ನಿದನೀಂ ಕೇಳ್ಬಸವಂ ಮಹಾಮಹಿಮನುಂ ತಾದೇವತಾವೀರನೌ ‖ ೪೭

## ಕಂದಪದ್ಯ

ಎಲೆತಾಯೆನಂದಿಮಹಿಮೆಯು
ನೆಲೆಯಂತಾನರಿಯಲಿಂಥ ಜನ್ಮಾಂತರಗಳ್
ಪಲೆಶತಮಾದರು ತೋರದು
ಬಲುಮಹಿಮಾನ್ವಿತನುದೇವನಾತನಿಗೆದುರೇ ‖ ೪೮

ನೀಪೋಗಿಬಸವರಾಜನ
ಚಾಪಲಬಲಪಾದವಿಡಿದು ಶಿರದೊಳ್ತಳೆದುಂ
ಕೋಪವನಂದಿ ಪಧ್ಯಾನವ
ನೀಪದಪಿಂ ಮಾಡುತಾನದೊಲಿವಂ ನಿನಗಂ ‖ ೪೯

ಶತದಶನಾಮಾವಳಿಯಂ
ಟೆತಿಶಯದಿಂ ನಂದಿಧ್ಯಾನಮುಂ ನಿನಗಂನಾಂ
ಜತೆಗೂಡಿಪೆ ತದ್ಧ್ಯಾನವ
ಮತಿಯಿಂ ನೀಮಾಡು ಫಲವುದೊರೆವುದು ನಿನಗೆ ‖ ೫೦

## ವಚನ

ಇಂತೆನ್ನುತಯತಿಪಂ ಭೂಕಾಂತೆಗಂಮುದಂ ಗೊಳಿಃ
ಪತ್ಕೃತಳಾಗಿ ದೇವಿಯಿಂದಳ್ ॥ ೫೧

(ಕಂಪಪದ್ಯ)

ಯತಿವರನೆನಂದಿಕೀರ್ತನ
ದತಿಶಯಮಂ ಪೇಳಿಕರ್ಣಪಾವನಗೊಳಿಸೈ
ಶತದಶವೊಂದಂದಂನೀಂ
ಜತೆಗೂಡಿಸಿ ಬೇಗದೆಂದಳಾ ಸುಂದರಿತಾ ॥ ೫೨

ಎಂತೆಂದನುಡಿಯ ಕೇಳುತ
ಸಂತೋಷದಯತಿಪ ನುಡಿದನೆಲೆಜನನಿಯೆಕೇ
ಳ್ಕಂತುವಿನ ವೈರಿಧರ್ಮನ
ಪ್ರಾಂತವನಾನೇನುಬಲ್ಲೆ ಭೂಜೀವನದೊಳ್ ॥ ೫೩

ಕೇಳೆಲೆವಧುನಂದಿಯಪದ
ಧೂಳಿಯ ಸಹನಾನು ಪೋಲೆಸಾಸಿರಮಂನಾಂ
ಪೇಳಲಿಕಪ್ಪುದೆಯಾದರು
ಪೇಳುವೆತಿಳಿದನಿತು ಕೇಳುನೀನಂದದಲಿ ॥ ೫೪

## — ವಚನ —

ಎಂದಾಮುನಿಪಂ । ಬಸವನಾಮಘನತೆಯಂ ನಿರೂಪಿಸಿದಂ । ೫೫

(ಚಂಪಕಮಾಲಾವೃತ್ತ)

ಬಸವನನಾಮರತ್ನವಭಿವರ್ಣಿಸಲಾಗದು ಶೇಷರಾಜಗಾ
ನುಸುರಲು ಶಕ್ಯಮಲ್ಲವುಬಕಾರವು ಬಾಧೆಯನಾಶಮಾಳ್ಪುದಾ
ವುಸಿಯದೆ ತಾಸಕಾರಮದು ಸಂಪದವಪ್ಪುದು ಕೀರ್ತಿಯಪ್ಪುದಿ
ನ್ನೆಸೆವವಕಾರ ಮೋಕ್ಷವನು ತೋರ್ಪುದುಕೇಳಿವು ಮೂರುವರ್ಣಗಳ್ । ೫೬

## (ಉತ್ಪಲಮಾಲಾವೃತ್ತ)

ನಂದಿಯಧ್ಯಾನಮಾಡೆ ಘನಪಾತಕ ಪೋಪುದು ಪೂಜೆಯಿಂದಲಿ
ಬಂದಿಹರೋಗನಾಶಮುದಾಮಹಿಮಾಂ ಬುಧಿಯುಕ್ತಿಯಿಂದಲಿ
ಚಂದದರೂಪವೀಕ್ಷಿಸಲು ದ್ವಾದಶಲಿಂಗದ ತೀರ್ಥಯಾತ್ರೆಯಂ
ಸಂದಿದಪುಣ್ಯ ಬರ್ಪುದರಿ ನೀನೆನಿತಾಮಣಿಯೆಂದ ನಾಮುನೀ । ೫೭
ಪಾವನದೇವ ಚಿಂತಿಪನ ವಾಂಛಿತವೀಯುವ ರತ್ನಕಾಮ್ಯವ
ನ್ನೀವಸುಕಾಮ್ಯದಾವು ತವಕಲ್ಪನೆಗಾಗಳೆ ಕಲ್ಪವೃಕ್ಷವುಂ
ಕೋವಿದಭಕ್ತರಿಷ್ಟವದು ಸಿದ್ಧಿಯು ತಾನಹುದಾದರೀಗನೀಂ
ಭಾವೆಯೆ ಬೇಸರಾಗದಿರು ನಂದಿಯ ಮೇಲಿನಪೂರ್ಣಭಕ್ತಿಗೆ । ೫೮
ಕಾಯಜ ವೈರಿತನ್ನುದರದಿಟ್ಟಿಹ ಭೂತಳಕೋಟಿ ಸಂಘಮಂ
ನೋಯದೆ ತಾನುತತ್ಸಿವನ ಪೊತ್ತನು ದೇಹದವೇಲದಾವಗಂ
ತೋಯಜೆ ನೇತ್ರೆಕೇಳ್ವರಮ ದೇವನವಿಕ್ರಮುವಾರುಬಣ್ಣಿಪ
ರ್ಮಾಯವಿದಲ್ಲನಂದಿ ಘನಲಿಂಗಶರೀರನು ಸತ್ಯವೆಂದನು ॥ ೫೯
ಶ್ರೀ ಪರಮೇಶಧರ್ಮವರ ರೂಪನಧ್ಯಾನವ ಮಾಡಿಮೀರಿದಾ
ಶ್ರೀಪತಿ ಮುಖ್ಯನಿರ್ಜರರು ಪೊಂದಿದರಾಗ ಮಹಾಪದತ್ರಯಂ
ಶ್ರೀಫಲಧಾನ್ಯ ಸಂಚಯು ವಧೂಜನಪುತ್ರ ಸುಮಿತ್ರರಿಂದಲಿ
ಶ್ರೀ ಪರಮಾತ್ಮನಾಜ್ಞೆಯಲಿ ಪೂರ್ತಿತರಪ್ಪರು ನಂದಿಧ್ಯಾನರು । ೬೦

### ಕಂದಪದ್ಯ

ಇಂತಹಮಹಿಮೆಯನಾಮುವ
ಸಂತಸದಿಂದೋದಿ ಕೇಳ್ದರೆಲ್ಲರಿಗನಿಶಂ
ಚಿಂತೆಯು ಪೋಗುವದೊಂದಕೆ
ಮುಂತಿನವನಿತೇಕೆ ಕೇಳ್ವುದೆಂದಂ ಮುನಿಪಂ ॥ ೬೧
ಜಗದೊಳ್ತೋರುವವರ್ಣಂ
ನಿಗಮಾತೀತೇಶ ಧ್ಯಾನ ಮೆನ್ನುತಲದರಿಂ

ಸುಗಮದಿ ಪೇಳ್ವರು ಸುಜ್ಞರ್
ಬಗೆದೋರುವ ವರ್ಣ ಮೆಲ್ಲಮಂತ್ರಗಳೆಂದು ॥ ೬೨

ಇಂತೆಂದು ಪೇಳಿ ಭೂಮಿಯ
ಕಾಂತೆಯು ಮನದಲ್ಲಿ ನಂದಿ ಭಕ್ತಿಯತೋರಿ
ಚಿಂತೆಯು ಬಿಡಿಸುತಕಳುಹಿದ
ನಂತಕನಾರಾತಿ ರೂಪುಕೇಳಿಲೆರಾಮ ॥ ೬೩

## ವಚನ

ಇಂತೆಂದು ಮುನಿಪಂ ಬಸವಧ್ಯಾನರ ಹಸ್ಯಮಂತಿಳುಪಿ
ನಂದಿಯನೊಲಿಸೆಂದು ಕಳುಹಲಾಗಳ್ಪರಮ ಭಕ್ತಿಯಿಂದಾ
ನಾರಿಪದಾಬ್ಜಕೆರಗಿ ಪೋಗಲಾಸಮಯದೊಳ್ । ೬೪

[ಉತ್ಪಲಮಾಲಾವೃತ್ತ]

ಕತ್ತಲೆನಾಶವಾಗಿ ರವಿರಸ್ಮಿಯುತಾಂ ತಲೆದೋರಿದಂತೆಸ
ಚ್ಚಿತ್ತಮುದಾಯ್ತು ಸಂಕಟೆರುದಂ ಬಸವೇಶನ ಧ್ಯಾನದಿಂದತಾ
ನೆತ್ತಲೊಪೋಯ್ತುದೆಂಬ ತೆರನಾಗಲು ಭಕ್ತಿಯ ಭೂಮಿಕಾಂತೆ ತಾ
ನುತ್ತುಮನಾಮ ಮಂಜಪಿಸುತಿರ್ದಳು ದೇವನನೋಡುವಾಶೆಯಿಂ । ೬೫

(ಚಂಪಕಮಾಲಾವೃತ್ತ)

ಅಡಿಗಡಿಗಾಗ ಧ್ಯಾನಿಸುತನಂದಿಪದಾಬ್ಜವ ಬೇಸರಿಲ್ಲದೆ
ಪೊಡಿವಿಯನಾರಿ ಪೋಗುವಳು ಕಾನನಕೊಳ್ಳಸರಿತ್ಪರಂಗಳಂ
ಬಿಡದೆಮಹಾನಗಂಗಳನು ದಾಟುತ ದೇವನದೇನುಮಾಳ್ಪನೊ
ಬಿಡಿಸುವನೆಂತು ನಾನವನ ಕ್ರೋಧದ ಮುದ್ರೆಯನೆಂಬ ಶೋಕದಿಂ

( ಉತ್ಪಲ ಮಾಲಾವೃತ್ತ )

ದೂರದೆ ಕಂಡಳಾಗ ಘನಕೋಪದೆ ಕೆಂಡವಕಾರ್ವ ನಂದಿಯಂ
ಧಾರುಣಿದೇವಿ ತಾಪದಲಿ ಪಾದವಧ್ಯಾನಿಪೆ ದೇವರಕ್ಷಿಸೈ

ನಾರಿಯಮೇಲೆನೀದಯುವ ದೋರುವುದೆನ್ನು ತಚೀರಿ ಮುಂದೆತಾ!
ನಾರಿಬಲೋತ್ತರಂ ವೆರಸುತಂ ಪಿಡಿದಳ್ ಶಿವಭಕ್ತಪಾದಮಂ ॥ ೬೭

ನಿರ್ಜರಪಾಲ ಕೋಪಪನುನೀ ಸಹಿಸಿನ್ನು ಮಹತ್ವಪಾಂಗದಿಂ
ನಿರ್ಜನಮಾಯ್ತು ಸಗ್ಗಮದು ಸರ್ವರಪಾಲಿಗೆ ನಿನ್ನವಾಕ್ಯದಾ
ಗರ್ಜನೆಯಿಲ್ಲ ದೀಕ್ಷಣವೆ ಬರ್ಪುದುಬೇಗಮೊಳೆಂದು ಬೇಡುವ
ನಿರ್ಜರನಾರಿಯಂತೆ ನೆರೆಯೊಪ್ಪಿದಳಾಗ ವಸುಂಧರೀವಧು । ೬೮

## ವಚನ

ಇಂತಾಗಲಾ ಸಮಯದೊಳ್ । ೬೯

### ಚಂಪಕಮಾಲಾವೃತ್ತ

ಬಸವನು ಧ್ಯಾನದಿಂತು ಹಿತನಾದನೊ ಭಾವದೆನಾರಿಹತ್ಯದಾ
ವಿಷವದುಸೋಂಕಬೇಡ ವೆನಗೆಂದುರು ಕೋಪವಮಾಣ್ದೆನಿಂತನೊ
ವಸುಧಿಗೆ ಮೇಲುಕಾಣ ವನು ಸದ್ವಿನಯಾಂಗನದೆಂದು ತೋರ್ಪನೇ
ನುಸುರಲಶಕ್ಯಮಾಬಸವ ನೆತ್ತಿದ ತನ್ನಯಧರ್ಮಪಾದಮಂ । ೭೦

### (ಉತ್ಪಲಮಾಲಾವೃತ್ತ)

ಎತ್ತಿದಪಾದಮಂ ಲಲನೆ ತನ್ನಯನೆತ್ತಿಯೊಳಿಟ್ಟು ಭಕ್ತಿಯಿಂ
ದುತ್ತಮನಾಮಮಂ ಜಪಿಸುತಿರ್ದಳು ನೀಜಯಕಾರಿವಿಕ್ರಮಂ
ಮೃತ್ಯುವಿನಾಶಮುಕ್ತಿವಧು ವೀಕ್ಷಿಪದರ್ಪಣ ನೀನೆಪಾವನಂ
ಚಿತ್ತದಿಲಾಲಿಸುತ್ತ ಘನತಾಪವ ನೀಗುವುದೆನ್ನು ತಾವಧು । ೭೧

## — ವಚನ —

ಎಂದಾಭೂಕಾಂತೆಯಾನಂದದಿಂ ಬಲಪಾದಮಂ ಶಿರಹಮೇಲಿಟ್ಟು
ಭಯಭಕ್ತಿಯಿಂ ನುತಿಸುತಿರ್ದು

(ಮತ್ತೇಭವಿಕ್ರೀಡಿತವೃತ್ತ)

ಭಜಿಪೆಂ ಶಂಕರಧರ್ಮರೂಪುವರಶೈವಾಚಾರ ಸಂಜೀವನಾ
ಭಜಿಪೆಂ ನಿರ್ಮಲಚಿತ್ತವೇದಮಯನೇ ಸದ್ಭಾವ ಸಂಪರ್ಕನೇ
ಬಜಿಪೆಂ ಪಾಪವಿದೂರನೇ ಯತಿಶಿಲಾದಂಗಾತ್ಮಸಂಭೂತನೇ
ಭಜಿಪೆಂ ದೇವರದೇವನೇ ಸಲಹುನೀನೆಂದಳ್ದಳಾನಾರಿಯು || ೭೩

ನಮಿಪೆಂ ಕಾರಣಕರ್ತಲೋಕ ನಮಿತಾ ಫಾಲಾಕ್ಷಧರ್ಮಾತ್ಮಕಾ
ನಮಿಪೆಂ ವೇದಕತೀತಲಿಂಗಮಯನೇತ್ರೈಕಶ್ಮಲಚ್ಛೇದನೇ
ನಮಿಪೆಂ ಸದ್ವಿನಯಾಂಗ ಷಟ್ಸ್ಥಲಸು ಶೋಭಾನಂತವಿದ್ಯಾತ್ಮಕಾ
ನಮಿಪೆಂ ಶೋಭಿತಫಾಲಭಸ್ಮ ಪೊರೆಯೈನೀನೆಂದು ತಾನಳ್ದಳು |೭೪

( ಕಂದಪದ್ಯ )

ಕ್ಷಾಮನೆ ಕೇಳಾ ನಂದಿಯ
ಪ್ರೇಮದ ವರ್ಣನೆಯು ಬೇಸರಪ್ಪುದೆ ಮನದೊಳ್
ಭೂಮಿಯುಮಾತೆಯುಮತ್ತಾ
ಸ್ವಾಮಿಯ ಧ್ಯಾನವನು ಮಾಡುತಿರ್ದಳ್ತಾನುಂ | ೭೫

(ಚಂಪಕಮಾಲಾವೃತ್ತ)

ಜಯಜಯಕಾಮವೈರಿಯ ಪದಾಬ್ಜಮಧುವ್ರತಕಾರ್ಯದಕ್ಷನೇ
ಜಯಜಯಬ್ರಹ್ಮಚರ್ಯಸುಖಮಾಮರಚೈತ್ರಸದಾನತೇಜನೇ
ಜಯಜಯತತ್ವವಾಕ್ಯವದನಾರ್ಯ ನಿರಾಮಯ ಭಕ್ತಿಚಂದಿರಾ
ಜಯಜಯಶುಭ್ರದಂಗನಘ ಭಂಗನೆ ಪಾಲಿಸುನಂದಿಕೇಶ್ವರಾ | ೭೬

(ಉತ್ಪಲಮಾಲಾವೃತ್ತ)

ನೀನಘನಾಶನೀನೆ ಸಕಲಾಧಿಪ ನಿನ್ನೊಳು ಕಾಲಕರ್ಮಗಳ್
ತಾನೆಯೆ ತೋರಿಪೋಪುವವು ನೀಮಹಿಮಾಂಬುಧಿಯುಗ್ರರೀತಿಯಿಂ
ನೀನಪಘಾತತೋರಲದರದ್ಭುತತಾಳುವರಾರು ದೇವನೇ
ಮಾನಿನಿಯಂ ನಿರೀಕ್ಷಿಸೆನುತಾವಧುನಂದಿಯ ಧ್ಯಾನಗೊಂಡಳು | ೭೭

ಉಗ್ರದರೀತಿಯಂ ಬಿಸುಡುಶಾಂತಿಯ ತೋರುಸುವಾಕ್ಯದಿಂದಲಿ
ತ್ಯಗ್ರವಕೇಳುತಾಳುಸುಮನೇಶನ ದುರ್ಮದಕಾಗಿ ತೋರಿದೀ
ನಿಗ್ರಹಬಾಡಿ ಬೆಂದಬಗೆ ದಾಳ್ದಿನು ಜಾಳಮಿದಲ್ಲ ಶಂಭುಭ
ಕ್ತಾಗ್ರನೆ ಬೇಡ್ವೆ ನಿನ್ನ ಪದವಾರಿಜವೆಂದಳು ಭೂಮಿಕಾಂತೆತಾ । ೭೮
ನಿತ್ಯನೆನಿರ್ಗುಣಾತ್ಮಕನೆ ನಿರ್ಮಲಶಾಂತನೆ ರೂಪುದೂರನೇ
ಸತ್ಯನೆನಿರ್ವಿಕಲ್ಪನವಿರಾಮುಳ ಮೂರ್ತಿಯೆ ಸ್ವಪ್ರಕಾಶನೇ
ಚಿತ್ತಜನಾಶಧರ್ಮವಿಮಲಾತ್ಮಕರೂಪನೆನೆಂದಿ ದೇವನೆ
ಭೃತ್ಯಳುನಾನುಮಾಳ್ಪೆತವಪಾದದಧ್ಯಾನವರಕ್ಷಿಸೆಂದಳು । ೭೯
ನಂಬಿಗೆಯುಳ್ಳ ಭಕ್ತರೆದೆಗಿಂಬನು ಪಾಲಿಪೆದೇವ ನಿನ್ನೊಳು
ನಂಬಿಗೆಯಿಲ್ಲದಿರ್ದರೆದೆಗಂಬನು ತೋರುವೆದೇವನಿನ್ನನಾ
ನಂಬಿದೆ ರಕ್ಷಿಸೆನ್ನಬಿಡುಕೋಪವಶಾಂತವದೋರ್ವುದೆನ್ನುತಾ
ಕುಂಭಿನಿನಾರಿಹಂಬಲದೆ ಕೀರ್ತಿಸುತಿರ್ದಳು ನಂದಿದೇವನ ॥ ೮೦
ಪಾವನವಾದ ನಿನ್ನ ಘನಪಾದವಕಾಣದೆಮುಂಕುಬುದ್ಧಿಯಿಂ
ದಾವನದೇಶಕೊಳ್ಳಮಿನಿತಾಗಿಯೆದಾಟುತದೇಹದಂಡದಿಂ
ದೀವನಿತಾಬಳಲ್ದಳದುಬ್ಬೊಬ್ಬುಳಿಪೂವನುನಂಬಿ ಕಂಜವುಂ
ಭಾವಿಸದಾದಭೃಂಗಪಿರಿದಾಯುಸಗೊಂಬುವೊಲೆಂದಳಾವಧು ॥ ೮೧

[ಕಂದಪದ್ಯ]

ಇಂತೆಂದುನುತಿ ಸುವಾಭೂ
ಕಾಂತೆಗೆಮನವೊಲಿದು ನಂದಿತೋರಿದನಾಗಳ್
ಸಂತಸದಸುಪ್ರಸನ್ನತೆ
ಯಂತಳೆದಾಲಿಸುವುದೆನುತ ಸಂತೋಷದಲಿ ॥ ೮೨
ಆಗಳ್ನಂದಿಯುಕೇಳಿದ
ನೀಗುವೆನಿನ್ನನಿತುಕಷ್ಟಮೇತಕೆ ಬಂದೈ

ನೀಗಲೆನೀಮಾಡಿದೇಕೆ ಪೇಳುವದೆಂದು ೮೩

ಎಲೆನಾರಿ ಬಳಲದಿರುನೀ
ಸಲೆದುಃಖಿತರನ್ನು ನೋಡಿಸಹಿಸುವನಲ್ಲಂ
ಸಲಿಸುವೆನಿಷ್ಟಿಸುವರಮಂ
ಛಲಮಂಬಿಟ್ಟಿರ್ಪೆ ದುಷ್ಟದಿಕ್ಪಾಲಕನಾ ॥ ೮೪

## ವಚನ

ಎಂದಾಸಂದೀಶಂ ಮನಸುಪ್ರಸನ್ನತೆಯನಾಂತು ಧರಿಯಂಘಾ
ಸಿಗೈವುದಂ ತೊರೆದುಶಾಂತದಿಂದಾದೇವಿಯಂ ಕೇಳಲ್ಕನದಣಿ
ಯದಾದೇವಿ ನಂದಿಯನ್ನೀಕ್ಷಿಸಿ ಮಹದಾನಂದದಿಂದಂ ॥ ೮೫

## ಉತ್ಪಲಮಾಲಾವೃತ್ತ

ಕಂಡೆನುನಾನು ಕಲ್ಪತರುಕಂಡೆನು ಕಾಮ್ಯದಕಾಮಧೇನುಮಂ
ಕಂಡೆನುಸೌಖ್ಯದಾಗರವಕಂಡೆನು ನಿರ್ಮಳಮೂರ್ತಿಪಾದಮಂ
ಕಂಡೆನುಭಕ್ತಹೃತ್ಕುಮುದಚಂದ್ರನಕಂಡೆನು ದೇವನಿಂದಿಗಾಂ
ಕಂಡೆನದೆಂದುತೋಷದಧಿಯುಕ್ಕಿರ್ದತ ಬೀಳ್ದಳು ಪಾದಪದ್ಮಕೆ ॥ ೮೬

## ಚಂಪಕಮಾಲಾವೃತ್ತ

ಬದುಕಿದೆ ದೇವನಿನ್ನ ನಿಜರೂಪವಕಾಣುತಲಿಂದುಧನ್ಯಳ್ಕೆ
ಬದುಕಿದೆನಿಂದ್ರತಾಪದನಲಂ ನೆರೆಪೋದುದುತ್ವತ್ಕೃಪಾಂಗದಿಂ
ಬದುಕಿದೆಬೇಡವೇನು ನನಗಿಷ್ಟಮದಿಲ್ಲವು ಸಾತ್ವಿಕತ್ವದಿಂ
ಬದುಕಿಪುದೆನ್ನಬಂದುಸದನಂ ಪೊಗುನೀನೆನುತೆಂದು ಬೇಡಿದಳ್ ೮೭

## (ಕಂದಪದ್ಯ)

ಬರುವದು ದೇವನೆಸಾತ್ವಿಕ
ದಿರವಂನೆರೆ ತೋರಿಸುತ್ತ ಲೆನ್ನಯಮನೆಯೊಳ್
ಇರುವದು ಕೊಡುನೀ ಬೇಗನೆ
ವರವನ್ನೆಂದೆನುತನಾರಿ ಪೊಡಮಟ್ಟಳ್ತಾಂ ॥ ೮೮

ಚಿತ್ತದೆಲಾಲಿಸುಸಿದ್ಧನೆ
ಸತ್ಯದವಚನದಲಿ ವರವಕೊಟ್ಟಂ ಬಸವಂ
ಚಿತ್ತದ ತೋಷದಲವನ
ಸ್ನರ್ತಿಯೊಳಂ ಕೂಡಿಬಂದಳಾನಂದದಲಿ । ೮೯

[ಚಂಪಕಮಾಲಾವೃತ್ತ]

ಮೆರೆದವು ಭೂಮಿಯಲ್ಲಿ ಕಹಳಾದಿಯ ವಾದ್ಯದ ಶಬ್ದವಾಗಲೇ
ಮೆರೆದವು ರತ್ನಕಾಂತಿಯು ಸುರಂಜನದಿಂ ಸದನಂಗಳೆಲ್ಲವು
ಮೆರೆದವು ಪಟ್ಟನಾದಿಗಳ ಪುಟ್ಟಪುರಂಗಳಿಗಿರ್ಪ ದ್ವಾರಗಳ್
ಮೆರೆದವು ತೋರಣಂಗಳಲಿ ನಂದಿಯ ತಾನಿದಿಗೊಂಡಳರ್ತಿಯಿಂ । ೯೦

ಸದನದದ್ವಾರಮಂ ಪೊಗುವಕಾಲದಿ ತಂದಳು ಜೋತಿಯಂಬಲಿ
ಮದನನ ರೂಪವಂಜಯಿಪ ನಂದಿಗೆ ಸಂತಸದಿಂವಲೆತ್ತುತಂ
ಚದುರೆಯು ಹೇಮರತ್ನವನು ಪೊಸ್ತಿಲದೊಳ್ನೆರೆತೀವಿಪಾದದಿಂ
ದದನುರೆ ದಾಟಿಸುತ್ತ ಕರೆದೊಯ್ದಳು ಭೂವಧು ತನ್ನತಾಣಕೆ॥ ೯೧

**ಕಂದಪದ್ಯ**

ಭೂದೇವಿ ಮಾಡಿದುತ್ಸವ
ದಾದಿನತಿಥಿ ಜೇಷ್ಟಶುಕ್ಲಪದಿನಾಲ್ಕಿತ್ರೈ
ಮೋದವ ಗೂಡುತಮೆರೆಸಿದ
ಳಾಧನಸನ್ಮಿತ್ರ ರೂಪನಂದೀಶನನು ॥ ೯೨

ಅದರಿಂದಿಂದಿನ ವರೆಗುಂ
ಮುದದಿಂದಂಮಾಳ್ಪರುತ್ಸವಾದಿಯಕಾರ್ಯಂ
ಸದನದೆಬಸವಂ ದಾಟುವ
ಹದನಾದಿಗಳೆಲ್ಲ ಧರೆಯಮೇಲಿನನರರು ॥ ೯೩

## ವಚನ

ಆಗಳಾನಂದೀಶಂ ಮನದರೋಷಮಂ ತೊರೆದು
ಪ್ರಸನ್ನವದನನಾಗಿ ॥ ೯೪

(ಉತ್ಪಲಮಾಲಾವೃತ್ತ)

ದೇವಿ ಸುಭಕ್ತಿಗಾಗ ಮನತೋಷವ ವೊಂದುತ ನಂದಿದೇವತಾ
ಭಾವದ ಹೋಷ ಮಾಣ್ಣಿನರವಾಸವೆ ನಿರ್ಜರವಾಸವೆಂದುಭೂ
ದೇವಿಯುಪಸ್ಥಿಥಾನವೆ ನಿರಂತರ ಮುಕ್ತಿಯುಭಾಗ್ಯ ಮೆಂಬುದಂ
ಭಾವಿಸಿ ಪೂರ್ವಮಂ ಮರೆದು ಸಂತಸದಿರ್ದನು ದೇವಧ್ಯಾನದಿ ॥ ೯೫

ಕಂದಪದ್ಯ

ಲಾಲಿಸುರಾಮನೆ ನಂದಿಯು
ಭೂಲೋಕದ ಬಾಳ್ಕೆಯಲ್ಲಿ ನಾನಿರಲತ್ತಂ
ಶೂಲಿಯಧ್ಯಾನವ ಗೈಯಲ್
ಮೇಲಾಗಹ ಠಾವನೆಲ್ಲಿ ಪುಡುಕುವದೆಂದಂ ॥ ೯೬

ವಚನ

ಇಂತಾನಂದೀಶಂ ತನ್ನಾತ್ಮ ದೇವನಂ ಧ್ಯಾನಿಸಲ್ಕೆ ಸುಪವಿತ್ರ ತಾಣ ಮೊಂದಂ ಪುಡುಕಿಸಿದ್ಧಾಶ್ರಮದ ಕಾನನದೊಳೊಂದು ಕೊಳನಿಂಲಾ ಪದ್ಮಾ ಕರತಟದೊಳ್ವಿಶಾಲಶೀತಲಚ್ಯೂತದಡಿಯೊಳ್ಪವಡಿಸಿತದ್ಧ್ಯಾನದೊಳ್ಕೂಡ್ದಂ

ಗದ್ಯ

ಇದು ಶ್ರೀಮದ್ವೀರಶೈವಾಚಾರ ಧುರೀಣಶಾಂಶವೀರದೇವರೊಡಲಬ್ಧಿ ಚಂದಿರಕವಿತಾಮಂದಿರಗುರುಲಿಂಗ ಕವಿರಚಿತಮಾದ ಬಸವಜನ್ಮಮಹಾಕಾ ವ್ಯದೊಳ್ ಷಷ್ಠಾಶ್ವಾಸಂ ಸಮಾಪ್ತಂ ಅಂತುಸಂಧಿಆರಕ್ಕಂಗಪ್ಪಪದ್ಯಂಗಳು ನಾಲ್ಕುನೂರಾಎಪ್ಪತ್ತೆಕ್ಕಂ ಮಂಗಲಮಹಾ

# 卐 ಸಪ್ತಮಾಶ್ವಾಸ ಪ್ರಾರಂಭ. 卐

(ಸ್ರಗ್ಧರಾವೃತ್ತ)

ಶ್ರೀ ಕಾಂತೇಕಾಕ್ಷಿ ಪಾದಂದನುಜರಶಿರಭೇದಂ ಸುಭಕ್ತಾಂಗವೋದಂ
ನಾಕೇಶಾದಿತ್ಯಪಾಲಂ ಸುರಮುನಿಜನವಿಲೋಲಂ ಸುವ್ಯಾಲಾಂಗಮೂಲಂ
ಗೋಕಾಂತಾಂಕಪ್ರಸಿದ್ಧಂ ಮದಮನುಜಗಸಾಧ್ಯಂ ಸುಚಾರಿತ್ರಚೋದ್ಯಂ
ಲೋಕಾನಂದಪ್ರದೀಪಂ ರಜತಗಿರಿಸುಚಾಪಂ ಪಾಲಿಕುಂತ್ರಿಗೋಪಂ । ೧
ಓಂಕಾರಾದ್ಯಂ ದ್ವಿರೂಪಂ ತ್ರತಯಹರಿಸುನೇತ್ರಂ ಚತುರ್ವೇದಗಾತ್ರಂ
ಸಂಕೀರ್ಣಂಪಂಚವಕ್ತ್ರಂ ಷಡುಲಪನಪಿತಂ ಸಪ್ತಜಿಹ್ವಾಲಲಾಟಂ
ಪಂಕೇಜಾತಾಷ್ಟಪತ್ರಾಲಯ ನವವಿಧಲಿಂಗಂಭುಜಂಗಳ್ದಶಂತಾಂ
ಕೈಕೊಂಡೀಧ್ಯಾನಮಂ ತಾಕೊಡಲೆನಗೆಸುಮುಕ್ತಿಯಂ ಶ್ರೀಸಿದ್ಧಲಿಂಗಂ । ೨

## ವಚನ

ಇಂತಾನಂದೀಶ್ವರಂ ಸಿದ್ಧಪರ್ವತ ದಡಿಯೊಳ್ಪವಡಿಸಿರಲಿತ್ತ ಸುರಪಂ ಪಟ್ಟದಕಲ್ಲೆನಿಪ ಪೊಳಲ ಪ್ರಭುತ್ವಮಂಗೈವ ಲೋಕಚೂಡಾರತ್ನನಂಗದೊಳ್ಜನಿಸಿ ಬೆಳೆಯುತಿರ್ದಂ ॥ ೩

(ಚಂಪಕಮಾಲಾವೃತ್ತ)

ಜನಿಸಿದನಿಂದ್ರ ಪಟ್ಟದರೆಯಂಡೆನಿಸಿರ್ದಮಹತ್ಪ್ರದೇಶದೊ
ಳ್ಮನಸಿಜವೈರಿಶಾಪದುರು ಲೊಳ್ಕಿರೆ ಸಿಲ್ಕುತ ಭೂಪನಂಗದೊಳ್
ಅನಿಮಿಷನೆಂಬು ನಾಮವನುತಾಳುತ ಸ್ವರ್ಗವಪೋಲ್ವಸೌಖ್ಯದಿಂ
ಘನಸುಖಮಾಂತು ತಾಬೆಳೆಯುತಿರ್ದನು ಭೂಮಿಯೊಳಾಗನಿತ್ಯದಿ । ೪
ಧರೆಯಲಿಸಂಭ್ರಮಾನ್ವಿತದಿ ಶೋಭಿಸಿತಾಗ ಬಿಡಾಜನಾಗರಂ
ಪರಿಪರಿಸಾಲಸಾಲಕದಳೀತರುಲುಂಗಲವಂಗ ಕರ್ಪುರಂ ॥

ತರುಘನಪೂಗ ಚಂಪಕರಸಾಲ ಸುದಾಡಿಮನಾರಿ ಕೇಳ್ಫಲಂ
ಭರಿತಮದಾಗಿ ಕಂಗೊಳಿಸುತಿರ್ದವು ಭೂಮಿಯೊಳಿಂದ್ರನೊಂದಿಗೆ । ೫

[ಮತ್ತೇಭವಿಕ್ರೀಡಿತವೃತ್ತ]

ಸುರಪಂತಾಧರೆಯಲ್ಲಿ ಜನ್ಮತಳೆದಂ ಕೈಲಾಸದೊಳ್ನಾವದಿಂ
ನ್ನಿರಲೇಂ ಕಾರಣವೆಂದು ಭೋಗತತಿತಾಂಬಂದಿರ್ಪುವೋದೇವನಾ
ವರದುಶ್ಯಾಪಕೆ ಪುಟ್ಟಿಬಂದಿಹವೊ ಸೌಭಾಗ್ಯಂಗಳಾತಾಣದ
ಲ್ಲರರೇ ಬಣ್ಣಿಪರಾರು ಪಟ್ಟದಪುರಂ ವೈಕುಂಠಮಂ ಪೋಲಿತು । ೬

(ಕಂದಪದ್ಯ)

ತರಳನರೂಪವ ನೋಡುತ
ಭರವೋದವ ಪೊಂದಿಮನದೆ ಪಟ್ಟದರಾಯಂ
ಪರಿವಾರ ಪ್ರಜೆಕೆ ತನ್ನಯ
ಶಿರಿತಾಂ ಪೆಚ್ಚಲ್ಕೆ ಭಕ್ತಿನಿಮಗಿರಲೆಂದಂ ॥ ೭

[ಚಂಪಕಮಾಲಾವೃತ್ತ]

ಧರೆಯಲಿಕಂಡವಾಗ ಸಿರಿಸಿಂಗರ ತೋರಣಚಲ್ವವಾದ್ಯದಿಂ
ದುರುತರ ಭಕ್ತಿಯಿಂದ ಭವನಾಮದಕೀರ್ತನೆ ಮೇಣ್ಪುರಾಣಗ
ಳ್ಪರದಲಿ ಯೋಗಯಾಗ ದಿವಿಜೇಶನ ಜನ್ಮದೆ ಪಟ್ಟಕಲ್ಲೊಳು
ಪುರಹರ ಬಲ್ಲನೆಂಥ ಘನಪುಣ್ಯದೆ ಪುಟ್ಟಿಹನಾ ಬಿಡೌಜನು ॥ ೮

ಘನತೆಯನಾಂತು ರಾಜನಿರೆ ಬಾಲನಲೀಲೆಯ ಮುದ್ದುಶೋಭೆಯಿಂ
ದನುದಿನಮಪ್ಪಜೊಲ್ದುಟಿಯ ದಂಬೆಯಗಾಲಿನ ವಾಕ್ಯದೊಳ್ತೊದಳ್
ಜನನಿಗೆ ತೋರಿಸರ್ವ ಪರಿವಾರಕೆ ಮೋದವಬೀರಿ ಶಕ್ರತಾ
ನನಿಮಿಷನೆಂಬುದಂಜನಕೆ ತೋರ್ವನು ತನ್ನಯ ನೇತ್ರಯುಗ್ಮದಿಂ । ೯

(ಮತ್ತೇಭವಿಕ್ರೀಡಿತವೃತ್ತ)

ಕುವರಂ ಪುಟ್ಟದೆ ಬೆಂದುಬಾಡಿದರಸಂ ಚಂದ್ರಾಂಬರಲ್ಮೋದದಿಂ
ಜವದಿದಿಂದುಕ್ಕುವ ವಾರಿರಾಶಿತೆರದಿಂ ತಾನುರ್ಕಿಸಂತೋಷದಿಂ

ಶಿವನಾಮಂ ಶಿವಪೂಜೆಮೇಣ್ ಶಿವನಧ್ಯಾನಾನಂದದೊಳ್ತೀಲುತಂ
ಭವದೊಳ್ತಾ ಮುದಗೊಂಡನಿತ್ತ ಬೆಳೆದಂ ಶುಕ್ಲೇಂದು ಪೋಲಿಂದ್ರಸು ।

## ವಚನ

ಇಂತಾಸುತ್ರಾಮಂ ಲೋಕಚೂಡಾರತ್ನನಂಗದೊಳ್ಪುಟ್ಟಿ ಬೆಳೆಯುತಿ
ರಲಾತಗಂ ಪಂಚವರ್ಷದಾಯುಮಾಗಲ್ ॥ ೧೧

## ಕಂದಪದ್ಯ

ಕರೆಸಿದ ಮಂತ್ರಿಗಳರಸಂ
ತರಳಂ ವಿದ್ಯಾಭ್ಯಾಸಗೈವಸಮಯಮದೆನುತಂ
ನೆರೆಸಿದ ಸಭೆಯಂಮುದದಿಂ
ದೊರೆದಂ ತನಗಿರ್ಪಮನದ ಹೆಬ್ಬಯಕೆಯನು ॥ ೧೨

ಬಾಲಕನಕ್ಷರ ಕಲಿಯುವ
ಕಾಲವು ತಾನೀಗಪೇಳಿ ಮಂತ್ರಿಶ್ವರರೇ
ಬಾಲಕನೇನೇಂಕಲಿಯಲ್
ಕಾಲಕ್ಕನುಗುಣದೆ ಮಾನ್ಯನಪ್ಪಂಜಗದೊಳ್ ॥೧೩

ಇಂತೆಂದು ಕೇಳೆ ರಾಜಂ
ಸಂತೋಷದ ಲೊಬ್ಬ ಮಂತ್ರಿಕೇಳ್ಮೈ ಭೂಪಾ
ಕಂತುವಿನವೈರಿ ಭುಜದಿಂ
ತಾಂತೋರಿತುಕ್ಷಾತ್ರವಂಶ ತೋಳಿಂ ಬಾಳುಂ । ೧೪

ಕರಿತುರಗರಥವನೇರುತ
ಲರಿಯಂ ಸದೆಯಲ್ಕೆಕಲಿಯಲೀ ವಿದ್ಯೆಯುಮೇ
ಉರುತರ ಶಸ್ತ್ರಾಸ್ತ್ರಗಳಂ
ಭರದಿಂ ಸಾಧಿಸಲಿ ಬಾಲನ ನಿಮಿಷನೆಂದಂ । ೧೫

ಮತ್ತೊರ್ವ ಸಚಿವನೆದ್ದಂ
ಚಿತ್ತೈಸೈದೇವ ಜಗದೊಳುತ್ತುಮನೆನಿಸಿ

ಸತ್ಯಾಸತ್ಯದ ಸುರ್ವಾದ
ಗೊತ್ತಂತಿಳಿಯಲ್ಕೆ ನೀತಿಗಲಿಯುವದೆಂದಂ ॥ ೧೬
ಈರ್ವರ ನುಡಿಗುಂ ಕೇಳುತ
ಲೊರ್ವಂ ಮಂತ್ರೀಶನೆಪ್ಪ ಕೈಮುಗಿವುತೆ ತಾ
ನುರ್ವೀಶ ಕೇಳು ಪೇಳ್ವೆಂ
ಸರ್ವಕು ನಾನೊಪ್ಪೆಕಾಯುಮುಸ್ಥಿರಮಿಹುದು ೧೭
ನಾನಾರೆಂಬುವ ಕುರುಹಂ
ಮಾನವತಾತಿಳಿಯು ಬೇಕದೇತಕೆ ಬಂದೇಂ
ಏನಂಮಾಳ್ಪುದು ಜಗದೊಳ್
ನಾನೆಂತೀ ಭವವದಾಟಲೆಂಬುವಮುವದಿಂ । ೧೮
ಮುದ್ದಿಲ್ಲ ದಸ್ತ್ರಗಳಶತ
ಸದ್ಧಂಮಾಡಿದಡೆ ವೈರಿನಾಶಮುದಹುದೇ
ಮದ್ದಿರ್ಪದೊಂದು ತೋಘದು
ಸದ್ದನ್ನಡಗಿಪುದು ರಾಜನೀತಿಳಿ ಮನದೊಳ್ । ೧೯
ಅಕ್ಕರಕಲಿತರೆ ತಾಘಣಿ
ಯಕ್ಕರಮಂತಿರ್ದಿಕೊಂಡು ಮುಕ್ಕಣ್ಣನೊಳ್
ಕಕ್ಕುಲತೆ ಪೊಂದಬೇಕೈ
ದಕ್ಕಿನವಿದ್ಯೆಯಲಿ ಜನ್ಮಸಾರ್ಥಕಮಿಲ್ಲ ॥ ೨೦
ಆದ್ಯಂತ ಕೇಳ್ವದರಸಾ
ಸಿದ್ಧಾಂತಂ ಬಾಲನನಿಮಿಷಂಗಿದುಸಾಧ್ಯಂ
ಅಧ್ಯಾತ್ಮತತ್ವಸಾರದ
ವೃದ್ಧಾಚಾರ್ಯರನುಪುಡುಕಿ ಕಳುಹುವುದೆಂದಂ । ೨೧
ಎಲ್ಲರನುಡಿಯಂ ಕೇಳುತ
ಬಲ್ಲಿದ ಗುರುವನ್ನು ಪುಡುಕಿ ಚೂಡಾರತ್ನಂ

ನಿಲ್ಲದೆತನಯನಕೂಡುತ
ಲೆಲ್ಲಾವಿದ್ಯೆಯನುಕಲಿಯಲೆಂದವನಿಟ್ಟಂ ॥ ೨೨
ಓರಿಗೆ ಗೆಳೆಯರ ಕೂಡುತ
ಮೀರಿದಭಕ್ತಿಯಲಿ ಗುರುವಿನಾಜ್ಞೆಯ ತಳೆದುಂ
ಪಾರಂಗತನಾದಂಪುರ
ಧೀರಂಪಠಿಸುತ್ತ ಸರ್ವಶಾಸ್ತ್ರಂಗಳತಾ ॥ ೨೩

## ಚಂಪಕಮಾಲಾವೃತ್ತ

ಪಠಿಸಿದನಿಂದ್ರವಿಸ್ತರಿತ ಶಾಸ್ತ್ರದಬೋಧೆಯ ಭೂಖಗೋಲಮಂ
ಕಠಿಣಮುದಪ್ಪಥರ್ವಣಯಜುರ್ಮಹಿಮೋತ್ತರವೇದವಾಕ್ಯಮಂ
ಪಟುತರವಾಜಿವಾಹಧನುಭೇದನ ಮಾಂತ್ರಿಕದಸ್ತ್ರಸಂಘತಾ
ನಿಟಿಕಿರಿದಿರ್ಪಮೂರ್ತಿಯದು ತಾನೆನೆಸದ್ಗುರುಪಾದಪದ್ಮದೊಳ್ । ೨೪

## ಕಂದಪದ್ಯ

ಇಂತಹವಿದ್ಯಾಪೂರಿತ
ಸಂತಸಗೊಂಡಿಂದ್ರಶ್ರೀಯಸಾನ್ವಿತನಾಗಿ
ತಾಂತಳೆದಂ ಗುರುವಿನೊಳಂ
ಸಂತೋಷದನುಜ್ಞೆಯನ್ನು ಪುರಗಾಂಬುದಕೆ । ೨೫

## ಮತ್ತೇಭವಿಕ್ರೀಡಿತವೃತ್ತ

ನವಸಲ್ಲಕ್ಷಣಗೂಡಿರತ್ನ ನಿಧಿಯಂ ಸದ್ಭಾವದೊಳ್ಮಾನಿಯಂ
ಕವಿವೊಲ್ವಾಕ್ಯಗಭೀರದಿಂ ಸುಶರಸಂಧಾನತ್ವದಿಂದಬ್ಧಿಯಂ
ಶವಮೀನಾಂಕನರೂಪಭಂಗಗೊಳಿಸುತ್ತಾ ಶಂಭುವಂರಾಸಿಸಂ
ಘವತಾಂಪೋಲ್ಪುತ ಸಿಂಹತೋಲಧನುವಿಂತಾಕಂಡತಾತಾಂಘ್ರಿಯಂ । ೨೬

( ಕಂದಪದ್ಯ )

ಸಕಲಸುವಿದ್ಯಾಪೂರಿತ
ನಕಳಂ ಕಾನನದೆ ಪುತ್ರವಂದಿಸೆಪದದೊಳ್
ಸುಕರದಿಸಿರವನ್ನೆತ್ತುತ
ವಿಕಸಿತಮುಖದರಸನುಕ್ಕಿದಂವಾರಿಧಿವೊಲ್ । ೨೭

## ವಚನ

ಸಂತಸಾನ್ವಿತನೃಪಂ ನವತಾರುಣ್ಯಷೋಡಶಾಬ್ಧವಯದ ಕುಮಾರನನ್ನೀಕ್ಷಿಸಿವುಂಡಾಡಿಬಿಗಿದಪ್ಪುತಾನಂದದಿಂ

(ಕಂದಪದ್ಯ)

ಕರಸಿದನೆಲ್ಲಾ ಬಳಗವ
ಮೆರೆಸುತತರುಳನನುತನ್ನಪುರದೊಳ್ಮುದದಿಂ
ತರಿಸಿದನನುರೂಪಿತವಧು
ವರವೈವಾಹವನುಮಾಡಿದಂ ರಾಜೇಂದ್ರಂ ॥ ೨೮
ಆಸಮಯದೆತಾಮನದೊಳ
ಗಾಸಿಸಿಘೋರೆತನವ ತನಯುಸಾಗಿಪತೆರದಿಂ
ಲೇಸಾದ ತನ್ನ ಪೀಠದೊ
ಳಾಸನಮಾಡೆಂದು ಭೂಪನ ನಿಮಿಷಗೆಂದಂ । ೧೩
ಕೊಟ್ಟಂ ತನಯುಗೆ ಹಸ್ತದ
ಪಟ್ಟದ ಮುದ್ರೆಯನು ಮೆರೆವಚಂದ್ರಾಯುಧಮಂ
ಇಟ್ಟಂ ಶಿರಕೆಕಿರೀಟವ
ನೆಟ್ಟನೆರಾಜ್ಯವನು ಬಿಟ್ಟುವನ ಕೈದಿದನು ॥ ೩೧

(ಮತ್ತೇಭವಿಕ್ರೀಡಿತವೃತ)

ಪುರದೊಳ್ಪೊಯ್ಸಿದಭೇರಿಯಿಂ ಪದಪಿನಿಂ ವೃದ್ಧಾದಿ ಬಾಲರ್ಕಳಂ
ಕರೆದುಂ ತ್ಯಾಗದೆತೃಪ್ತಿಗೈಸಿ ಸೆರೆಯಿಂ ಮುಕ್ತತ್ವಮಂ ಮಾಡುತಂ
ಗಿರಿಜೇಶಾಲಯವೆಲ್ಲಮಂ ತಳಿರಿನಿಂ ಸೌಂದರ್ಯಮಂಗೈವುತಂ
ಪರಮಾನಂದದೆ ರಾಜ್ಯಭಾರತಳೆದಂ ಸುತ್ರಾಮನಾಕಾಲದೊಳ್ ॥ ೩೭

(ಚಂಪಕಮಾಲಾವೃತ್ತ)

ನಡೆಸಿದನಾಗ ದೇಶದಲಿ ಮೀರಿದ ದರ್ಪವ ರಾಜಸಂಘದಿಂ
ಪಡೆಸಿದನರ್ಥ ಸಂಚಯವಕೋಶಕೆ ವೈರಿಗೆ ತಕ್ಕಶಿಕ್ಷೆಯಂ
ಕೊಡಿಸಿದನಿಸ್ನು ಬಾಲಕರ ಲಗ್ನವ ಧೂಜನ ವಿಕ್ರಯಂಗಳಂ
ಬಿಡಿಸಿದನಿಂತುಯುಕ್ತಿಯಲಿ ಮಾನಿತನಾಗಿಹ ಶಕ್ರಬೇಗದಿಂ ॥ ೩೩

[ಕಂದಪದ್ಯ]

ಇಂತಹನ ನಿಮಿಷರಾಯಂ
ಕಂತುವಿನಾರಾತಿ ಭಕ್ತಿಯಂ ತಳೆಯುತತ
ನ್ನಂತರ ನಿರ್ಮಲತೆಯೊಳಿರೆ
ಕಾಂತಿಯು ಬೀರುತ್ತ ವೃಷಭಮುನಿತಾಂಬಂದಂ । ೩೪

(ಮತ್ತೇಭವಿಕ್ರೀಡಿತವೃತ್ತ)

ಸುರಪಾಲಂಮುನಿವರ್ಯನಾಗಮವತಾ ಕಾಣುತ್ತ ಸದ್ಭಕ್ತಿಯಿಂ
ಶಿರಮಂ ಬಾಗುತ ಶರ್ವರೂಪನೆನುತಂ ಸಾಷ್ಟಾಂಗವಂ ಗೈಯ್ಯುತಾ
ಪರಿವಾರ ಪ್ರಜೆಗಳ್ಮುದಂದಳೆಯುತಂ ಮೌನೀಶಗಂ ವಂದಿಸಲ್
ತ್ವರದಿಂತಾಂ ಪಿಡಿದೆಳ್ತಿಯೋಗಿವರತಾಂ ಸಂತೈಸಿದಂ ಸರ್ವರಂ । ೩೫
ಭರದಿಂದಾ ಮುನಿಹಸ್ತಲಾಘವನತಾಂ ಕೈಕೊಳ್ಳುತಂ ಭಕ್ತಿಯಿಂ
ಕರದೊಯ್ದುಂ ವರಸಿಂಹಪೀಠಕವರಂ ಮೂಹೂರ್ತಮಂ ಗೈವುತಂ
ಧರಿಸಿರ್ದಾಹರನಕ್ಷಿಯಂ ಭಸಿತಮಂ ಕಾಷಾಯವನ್ನೀಕ್ಷಿಸೀ
ನರನಾಥಂ ಪರಮೇಶರೂಪನೆನುತಂ ತಾಕಂಡನಾಯೋಗಿಯಂ । ೩೬

(ಕಂದಪದ್ಯ)

ಸಕಲಶಿರೋಮಣಿಮುಕುಟದ
ವಿಕಸಿತ ಕಾಂತಿಯುಲಿತುಂಬಿತೆನ್ನಯುಪಾದಂ
ಅಕಳಂಕ ಮೌನಿಪಾದಕೆ
ಮುಕುಟವನಾಂಬಾಗಿ ಸಲ್ಕೆಕಾರಣಮೇನೈ । ೩೭
ಯುತಿವರಧರಿಸಿದ ವಸನವ
ನತಿಶಯ ಕಾಂತಿ ಯುಲಿತ್ರೋರ್ಪತ್ರ್ಯಪುಂಡ್ರವನು
ಸತತದಿ ಕೊರಳೊಳ್ಧರಿಸಿಹ
ಕ್ಷಿತಿರಥನಕ್ಷಿಗಳನಾನದೇಂ ಬಣ್ಣಿಸುವಂ ।೩೮
ಏನಿರುವದು ಭಸ್ಮದಿತಾ
ನೇನಿರುವದು ರುದ್ರನಯನ ಮಾಲಿಕೆಯೊಳಗಂ
ಏನಿರುವದು ಶಿರಜೆಡೆಯೊಳ್
ತಾನೇನಿಹುದಿಂತು ಸರ್ವಜನಮಣಿಯುಲಿಕೆ ೩೯

## ವಚನ

ಇತಾಪ್ರೊಳಲಿರೆಯುಂ ಗಿಳಿದೇರನವೈರಿಯರೂಪನಾಂತೆ ಮುನಿವರನವದನಮಂ ಬಿಡಬಿಡದೆ ನೋಡಿಥಳಥಳಿಪಕ್ಷ ಮಾಲಿಕಮುಂಡಲುಗಳಂ ಧರಿಸಿರ್ದ ಕ್ರೋಧಗಲಿತಮೂರ್ತಿಯುಂ ಕಂಡುಬೆಸಗೊಂಡಂ ॥ ೪೦

## ಮತ್ತೇಭವಿಕ್ರೀಡಿತವೃತ್ತ

ಎಲೆದೇವೇಶನೆ ನಿನ್ನಪಾದರವಿತಾಂ ಮುಂಗಾಣಲೆನ್ನಂಗದಾ
ಕಲುಷಂ ಕೃಷ್ಣತಮೌಘಪೋದುದರರೇ ನಿರ್ಭಾಗ್ಯನಿದ್ದಲ್ಲಿಗೆ
ಬಲಮಾದರ್ಘದಕುಂಭ ಬಂದತೆರದಿಂ ನಿಮ್ಮಾಗಮಂ ಪೊಲ್ತುದೈ
ಫಲವೇನೀಭಸಿತಾಂಗದಿಂದರುಹುನೀಂ ಸಂದೇಹಮಂ ಮಾಣಿಸಿ ॥ ೪೧

## ಚಂಪಕಮಾಲಾವೃತ್ತ

ಧರೆಯನು ಪೊತ್ತ ಶೇಷಶಿರಮಾಣಿಕಕಾಂತಿಯ ಪಾಳುಗೈವುತಂ
ಪುರಹರನೇತ್ರಮಾಲೆ ವರಚಂದನಲೇಪನ ಮೀರಿಭಸ್ಮತಾ
ಪರಿಪರಿಚಿತ್ರಶೋಭೆವಿಡಿದಿರ್ದುದು ಕೂಲವ ನಾಚಿಪುತ್ತತಾ
ಧರಿಸಿದ ಶಾಟಿಕಂಗೊಳಿಪುದೇನಿಹುದಚ್ಚರಿ ಪೇಳ್ವುದೆಂದನು । ೪೨

## ವಚನ

ಇಂತೆಂದುಸಂದೆಗಂ ಮಾಳ್ಪರಾಯನಿರಮಂ ನೋಡಿ ಮುನಿಪಂ ಸದ
ಯಾಂತಃಕರುಣದಿಂದಷ್ಟಾವರಣ ಮಹಾತ್ಮೆಯಂನಿರೂಪಿಸಿದಂ । ೪೩

## [ಕಂದಪದ್ಯ]

ನರಪಾಲನೆ ಕೇಳೀಗಲೆ
ಹರನಕ್ಷಿಯ ಶೋಭೆಯನ್ನು ಬಣ್ಣಿಸಲಳವೇ
ಪುರಹರಬಲ್ಲಂ ಭಸಿತದ
ಪರಿಯಂ ಪೇಳುವಡೆ ಜಿಹ್ವೆಸಾಲದುನನಗೆ । ೪೪

ಗುರುಲಿಂಗ ಜಂಗಮಂಪುರ
ಹರನಕ್ಷಿಯು ಭಸಿತ ಮಂತ್ರ ಪಾದೋದಕಮೇಣ್
ಪರಮಪ್ರಸಾದವೆಂಬುವ
ವರದಷ್ಟಾವರಣ ಕೇಳು ಭೂಪನೆ ಬೇಗಂ । ೪೫

ಆವನ ಮಹಿಮೆಯಲೀಜಗ
ಪಾವನನಿರ್ಧೂಮವಪ್ಪುವವನೊಳ್ತಾಸ
ದ್ಭಾವದೆ ಧಾರಣಮಾಗಿಹ
ಪಾವನದಾವರಣಮಹಿಮೆಕಿರುಕುಳ ಮಲ್ಲೈ । ೪೬

ಇಂತಹ ಸೌಂದರ್ಯಂಭೂ
ಕಾಂತರಮನ ಬೇಸರಪ್ಪುವವರೊಳ್ವಿಷಯಾ
ಭ್ರಾಂತಿಯು ತುಂಬುತಮೋಹಕೆ
ಶಾಂತಸದಿಂ ಬೀಳ್ವರರಿಯೊರಾಜನೆ ನೀನು । ೪೭

ಭ್ರಾಂತಿಯೆಜೀವನಸದಂತಕ
ಭ್ರಾಂತಿಯೆಯಮನರಕವಾಸದುರ್ಗುಣಕೋಶ
ಭ್ರಾಂತಿಯೆ ಮುಕ್ತಿವಿನಾಶಕ
ಭ್ರಾಂತಿಯೆಭವಜನ್ಮತಾಳಿಬಳಲುವ ದೋಷಂ ॥ ೪೮

ಹುರುಕಿನತಿಂಡಿಯಕೆರೆಯುಲ್
ತ್ವರಿತದೆಸುಖದೋರಿ ಮುಂದೆಯುರಿಯುವತೆರದಿಂ
ಧರೆಭೋಗ ಮೊದಲುಸುಖದೋ
ಟ್ಟೆರೆಸುತಕಡೆಯಲ್ಲಿ ಕಷ್ಟಕೊಡುವವುನಿನಗೆ । ೪೯

ಇದುಕಾರಣ ರಾಜೇಂದ್ರನೆ
ಮದನಾರಿಯುವಾಕ್ಯದಂತೆ ಬೋಧಿಪ ಗುರುಗಳ್
ಇದರಂದವನ್ನು ತಿಳುಹಿಸಿ
ಮುದಮಂ ಬೀರುವರುಸಕಲಬ್ರಹ್ಮಾಂಡದೊಳು । ೫೦

ಮಲಗಿದ ಸಮಯದೆಗಂಟಂ
ಬಿಲಮಂ ಗೃಹದೊಳಗೆ ಮಾಡಿಕೊಳ್ವಾಖಳರಂ
ನೆಲೆಯುಡಿಗಿಸಿ ನಿಮ್ಮೀಸಿರಿ
ನಿಲಯುವಕಾಯ್ದಿರ್ಪರಾಜ ಸೇವಕರಂತೆ । ೫೧

ಅಂತಹ ಬೋಧೆಯತಿಳಿಯ
ಲ್ಸಂತಸ ಪುಟ್ಟುವದು ಭವವು ನಾಶಮದಹುದಾ
ಕಂತುವಿನ ವೈರಿಮತವಿದು
ನೀಂತಿಳಿ ರಾಜೇಂದ್ರ ಪೇಳ್ವೆ ನಿದರಿಂಗಿತಮಂ । ೫೨

ಅಜ್ಞನ ಕೋಲಂಪಿಡಿಯುತ
ಮಜ್ಜೀವದ ತುದಗಮೊಂದು ತರಳಂ ನಗುವಂ
ಸಜ್ಜೀವದಶ್ವ ನೋಡುತ
ಲಜ್ಜೆಯಮುಂದಿಟ್ಟಪಸುಳೆ ದಂಡವನೊಯ್ದು । ೫೩

# ವಚನ

ಇಂತರ್ನಂಗಾರಿ ರೂಪನು ಸಿರಲಾನಗಾರಿ ಪ್ರತಿರೂಪಂ ಪರಮಹರ್ಷಿತ ನಾಗಿ ಸರ್ಪಭೂಷಣನ ವಿಮಲಾವರಣ ಮಹಿಮೆಯಂ ಪೇಳೆಂದು ಮೃಗೇಂದ್ರ ಪೀಠದಡಿಯೊಳ್ಬೀಳ್ದು ಕೊಂಡಾಡಲಾಸಮಯದೊಳ

ಘಾರಿಮೌನಿಯೊರೆದಂ । ೫೪

## ಚಂಪಕಮಾಲಾವೃತ್ತ

ಅನಿಮಿಷರಾಯಕೇಳು ಘನತತ್ವವ ನಿರ್ಣಯ ಮಾಡಲಾರವೇ
ಮನಸಿಜತಾತವಾಣಿ ವರಮುಖ್ಯರು ಪೊಂದಿದರ್ರೈ ನಿರಾಶೆಯಂ
ಜನಿಪುದೆ ಪೇಳಲಿನ್ನಬಲ ಮಾದರುಬಲ್ಲನಿತಂ ನಿರೂಪಿಪೇ
ವಿನಯುವನಾಳು ತಾಲಿಪುದಿದೆಂದನು ಪಾಪಲತಾಲವಿತ್ರನು । ೫೫

## ಉತ್ಪಲಮಾಲಾವೃತ್ತ

ಆವನರಂ ಮಹೇಶಗಿರುವಾವರಣಂಗಳ ನಂಬಿಬಾಳ್ದಡೆ
ಭಾವಜಬಂಧಮಂ ಪರಿದುಕಾಲನ ಪಾಶವ ಮೀರಿಮೃತ್ಯುಮಂ
ಭಾವಿಸದಾತ್ಮ ತೇಜದಲಿ ಲಿಂಗದ ಶೋಭೆಯನಾಂತುಲಿಂಗದೊ
ಳ್ದೀವರದೇವನಂ ಬೆರೆವ ಪೇಳುವೆ ಕೇಳಿದ ರಂದಮೆಂದನು । ೫೬

## (ಕಂದಪದ್ಯ)

ಮೊದಲಿನ ದಾವರಣಂಗುರು
ವಿದರರ್ಥವ ಮಾಡಲಜನಿಗಾಗದುಕೇಳ್ ನೀ
ನೊದಗಿತು ನಿನ್ನಯ ಪುಣ್ಯಂ
ಮದನಾರಿಯ ವಾಕ್ಯವನ್ನು ಪೇಳುವೆನೆಂದಂ । ೫೭

ಪೇಳುವೆ ಗುರುವಿನ ಮಹಿಮೆಯ
ಕೇಳೈರಾಜೇಂದ್ರನವನೆ ಜಗದೊಳು ದಾತಂ
ಪೇಳ್ವವುನಿಗಮಾಗಮಗಳು
ಮೇಳೈಪನು ಜೀವದೇವರು ಭಯರದೆಂದು | ೫೮

ನಗುರೋರಧಿಕಮದೆಂಬಾ
ಸೊಗಸಿನ ನುಡಿಸತ್ಯಗುರುವು ಭೂಲೋಕಕ್ಕಂ
ಮಿಗಿಲತ್ವಾಷಧವವನೇ
ಸೊಗಸಿಂಭವದಾಟಿಸಂಥಸೌಕಾನಾಧಂ | ೫೯

ಗುರುವಂ ನರನೆಂದವಗಂ
ಹರನಂಶಿಲೆಯೆಂದುಜರೆದ ಮೂಢಗೆ ನರಕಂ
ದೊರೆವುದು ಸತ್ಯಂತಿಳಿನೀಂ
ನರಪಾಲನೆ ಗುರುಮಹತ್ವ ಏಂತಿಹುದೆಂದು | ೬೦

ನಿನ್ನಂತೆಯ ಗುರುದೇಹಂ
ಭಿನ್ನಂಕಾಣದಿರೆಯುವನುನರನೆ ನಿಪನೆಕೇಳ್
ಮಣ್ಣಂ ಪರುಷಂ ಮುಟ್ಟಲು
ಚಿನ್ನದರೂಪಾದ ತೆರದೆಮಾಳ್ಪಂ ಗುರುತಾಂ | ೬೧

ಲೋಹವನೀರೊಳೆಬಿಡೆತಾ
ಲೋಹವು ತಾಮುಳುಗಿ ಪೋಪುದೆಲೆರಾಜನೆಯಾ
ಲೋಹವನೌಕೆಯ ಮಾಡಲ್
ಲೋಹವು ತಾಂತೇಲುತನ್ಯರಂತಾರಿಪುದೈ || ೬೨

## ಮತ್ತೇಭವಿಕ್ರೀಡಿತವೃತ್ತ

ಗುರುವೆಂಬೆನ್ನಲುನಾಶಗೈಪ ಮಹದಿರ್ಪಜ್ಞಾನದುಷ್ಟಾಳಿಯಂ
ಗುರುವೇಸರ್ವಕೆ ಕರ್ತನೆಂದುನಿಗಮಂಗಳ್ಪೇಳ್ವವೈಯಿಂದಿಗೂ

ಗುರುದೇವಂ ಪರೆಬೊಮ್ಮ ತಾಂಗುರುವರಂಭಾಗ್ಯಕ್ಕೆ ಕಲ್ಪದ್ರುಮಂ
ಗುರುದೇವಂಜಗಬಂಧುಮಪ್ಪ ಗುರುವೇಜನ್ಮಾಬ್ಧಿಕುಂಭೋದ್ಭವಂ । ೬೩

ಧರೆಯೊಳ್ಮೀರಿದ ಶಾಸ್ತ್ರವೋದಿ ಪಲಕಾಲಂಮೌನಮಂ ತಾಳುತಂ
ಪರಿವಾರಪ್ರಜೆಗಳ್ಗೆ ಮೋದಗೊಡುತಂ ತ್ರೈಕಾಲ ಮೀಯುತ್ತತಾಂ
ಭರದಿಂ ಯಾತ್ರೆಗಳೆಲ್ಲ ಮಂತಿರುಗಿಗೋಭೂದಾನಗಳ್ಮಾಡುತಂ
ಮೆರೆಯಲ್ಕಾಣರು ಮುಕ್ತಿಯಂ ಗುರುವಿನಿಂಕೊಂಡಾಜ್ಞೆಯಂ ಮೀರ್ದವರ್

## ಕಂದಪದ್ಯ

ಭೂಪನೆ ಕೇಳೈಗುರುತಾಂ
ಕೋಪದಿದಂಡಿಸಲು ನಮಗೆ ಹಿತವೆನಿಸುವುದೈ
ವ್ಯಾಪಿತದುರ್ಗಣವಳಿವವು
ಕಾಪಾಲಿಯ ಸನ್ನಿಧಾನಮಪ್ಪುದುನಮಗೆ । ೬೫

ಶಾಲೆಯ ಬಾಲಕನಕ್ಷರ
ಶೀಲನದಾಗಿರಲು ಕೂಡದಂಡಿಪ ಗುರುತಾಂ
ಮೇಲಧಿಕಾರಿಯ ಮುಖದೊಳ್
ಬಾಲಕೆ ತಪ್ಪಿರಲು ಕ್ಷಮೆಯಬೇಡುವ ಗುರುತಾಂ । ೬೬

ಅದರಂತೆನರರಭವವಂ
ವಧಿಸಲು ಗುರುದೇವನವರ ದಂಡಿಸುತತಾಂ
ಮದನಾರಿಯೊಡನೆ ವಾದಿಸಿ
ವಿಧಿಸುವ ಮೋಕ್ಷವನು ಗುರುವದೆಂತಹಮಹಿಮಂ । ೬೭

ಗುರುತಾಂ ರಕ್ಷಣಕರ್ತಂ
ಗುರುದೇವಂ ರಕ್ಷೆಶಿಕ್ಷೆಯು ಭಯಕೆಕರ್ತಂ
ಗುರುಕರುಣದಿಂದೆ ಸುಖಮಯು
ಗುರುವಿನಕೋಪದಲಿ ಭಗ್ನಮಪ್ಪುದು ಜನತಾಂ । ೬೮

ಗುರುಬೋಧೆಯಿಂದ ಮೃನಿಸುತ
ವರಮೃತ್ಯುವ ಗೆಲ್ದ ವ್ಯಾಘತಾಂ ಮುನಿಯಾದಂ
ಗುರುದ್ರೋಹದಿಂದಲಿಂದ್ರಂ
ಸಿರಿಗೇಡಾಗಿರ್ಪ ಚಂದ್ರ ಕಳೆಗೇಡಾದಂ । ೭೯
ಏಸಂ ಪೇಳಲು ತಾನದು
ಕಾಸಂಸಹಪೋಲದೀಗ ಗುರುವಿನ ಬಲದೊಳ್
ದೋಷವಕಳೆವವ ಗುರುವರ
ಪಾಶಗಳಂ ಪರಿದು ಮೋಕ್ಷ ಗೈವವಗುರುವು । ೭೦
ಇಂತಪ್ಪತೆರದೆ ಗುರುವಿನ
ಸಂತಸದಿಂ ಸೇವೆಗೈದುಗೌರೀವರನಾ
ಮುಂತಿಹ ಪೀಠದೆ ಜನತಾ
ಸಂತಸದಿರುತಿರ್ಪರಿದರೊಳಂದನು ಪೇಳ್ವೆಂ । ೭೧
ಗುರುಭಕ್ತನೆಂಬ ಭಕ್ತಂ
ಗುರುವೆಂದೆನ್ನಿಸುವನ ಪುರಗುಂಡದವುಲ್ಲೇ
ಶ್ವರನೊಳು ಸೇವೆಯಮಾಡುತ
ಚಿರಕಾಲದೊಳಿದ್ದ ಭಾವ ಭಿನ್ನಿಸದಂತೆ । ೭೨

## ಚಂಪಕಮಾಲಾವೃತ್ತ

ಗುರುವಿನಸೇವೆಯಲ್ಲ ದರಿಯಂಪರ ಸೇವೆಯನಾವಕಾಲದೊಳ್
ಗುರುಪದಪೂಜೆದೇವಫಲ ಶ್ರೀಗುರುದೇವನೆಮಾತ್ರ ತಾತತಾ
ಗುರುವಿನ ವಾಕ್ಯವೇದಮುಯ ಬೋಧೆಯು ತದ್ಗುರುವಾಸ ತೀರ್ಥವೈ
ಗುರುವರನಲ್ಲವೆಂದುಮನದೊಳ್ನಿರುತಂತಿಳಿದಿರ್ದ ಕಾಲದೊಳ್ । ೭೩
ಗುರುವಿನಪಾದ ತನ್ನಡಿಗೆ ಸೋಂಕಲು ಕಾಣುತ ತನ್ನ ಪಾದಮಂ
ಗುರುವಿನ ದ್ರೋಹಗೈದವೆನು ತಂಕಡಿದಿಕ್ಕಲುಮುನ್ನಿ ನಂದದಿ

ಭರದಲಿತೋರೆ ಕತ್ತರಿಸಲಾಕ್ಷಣ ಪುಟ್ಟಿಹ ವೈದೆಪಾದಮೇ
ಖರುತರ ಕ್ರೋಧದಿಂಕಡಿಯೆತದ್ಗುರು ಬೊಧೆಯನಿತ್ತು ಮಾಣ್ಸಿದಂ । ೭೪

## ( ಕಂದಪದ್ಯ )

ಗುರುಭಕ್ತನ ಭಕ್ತಿಯಿಂ
ಗುರುವರನೀಕ್ಷಿಸಿದ ಮೇಲೆಯವನೊಳ್ಮೋವಂ
ನಿರುತದೆ ಮಾಡುತಲಿರುತಿರೆ
ಜರೆದಾಡಿದರೆಲ್ಲ ಶಿಷ್ಯಮಂಡಳಿತಾವು । ೭೫

ನಿತ್ಯದೆ ಮಾಳ್ಪೆವು ನಾವತಿ
ಯುತ್ತಮಸತ್ಕಾರ ಗುರುವುನಮ್ಮೆಲ್ಲರೊಳಂ
ಸತ್ಯವತೋರದೆ ಯಾಗುರು
ಭಕ್ತನ ತೋಷಿಪನುಮಾನ್ಯಮಪ್ಪುದೆ ತನಗೆ । ೭೬

ಕೇಳುವೆವವರಂ ತಾವಿದ
ಹೇಳುವರೇನೆಂದು ತಮ್ಮಪ್ರತಿನುಡಿಯೆಂದುಂ
ಮೇಳಾಗಿಬಂದುಕೇಳಲು
ಭಾಳಾಕ್ಷನರೂಪುಗುರುವು ತಾನಿಂತೆಂದಂ । ೭೭

## (ಮತ್ತೇಭವಿಕ್ರೀಡಿತವೃತ್ತ)

ಇರಲೈಭಕ್ತರೆ ನೀವೆಮಾನ್ಯರದರಿಂ ನಿಮ್ಮೆಲ್ಲಸದ್ಭಕ್ತಿಯಂ
ತ್ವರದಿಂನೋಳ್ಪೆನುನಾನುಶೂಲವನು ನೀವ್ಮೇಲ್ಪತ್ತಿರೆಂದೆನ್ನಲು
ಭರದಿಂ ಜಾರುತಪೋದರೆಲ್ಲರದರಂತೀಭಕ್ತಗಂ ಪೇಳಲಾ
ಗುರುಕಾರುಣ್ಯದಿ ಪೋಗಿಶೂಲವನು ತಾಮೇಲೇರಿದಂ ಭಕ್ತನು ॥ ೭೮

## (ಕಂದಪದ್ಯ)

ಗುರುಗಳಪ್ರೇಮವತಾನೀ
ಪರಿಯಿಂಪೊಂದಲಿಕೆ ಗೌರಿಯರಸಂ ಮುದದಿಂ

ಉರುತರಪದವನ್ನಿತ್ತನು
ಧರಣಿಪಕೇಳೆಂದ ವೃಷಭಮೌನಿಪನಾಗಳ್ ॥ ೭೯

## ವಚನ

ಇಂತಾಮುನಿಪಂ ಗುರುಮಹಿಮೆಯನು ಸಿರಲಾಧರಾ ಪಾಲನತುಲಹ
ರ್ಷಿತನಾಗಿ ಮುಂದಣಾವರಣವನ್ನರಿಯುವೆ ಭರದಿಂ ಪೇಳೆಂದೆರಗಲಾ
ಮುನಿಪಾಲಂ ಪೇಳಿದಂ ॥ ೮೦

## ( ಕಂದಪದ್ಯ )

ನರಪನೆ ಕೇಳೈನೀವರ
ಗುರುಮಹಿಮೆಯ ಕೇಳ್ದಿ ಮನದಿ ತಳೆಯೈ ಮುದಮಂ
ಗುರುದೇವ ಸೇವೆಗೈಯಲ್
ದೊರೆವುದು ಗುರುಕರುಣವೊಂದು ತೇಜಮನಾಂತು । ೮೧

ಇಂತಹಗುರುವರ ಕರುಣಾ
ತ್ಮಂತನ್ನಯಹಸ್ತದಿಡಲು ಘನತರದಿಂಸ
ಧ್ವಾಂತಹಲಿಂಗಮಡೆನಿಪುದು
ಮುಂತಿದರ ಮಹತ್ವ ಕೇಳ್ವುದನಿಮಿಷರಾಯ । ೮೨

## [ಮತ್ತೇಭವಿಕ್ರೀಡಿತವೃತ್ತ

ಗುರುತಾಂಭಾವಕೆ ತಂದು ಭಾವದೆಮ ನಕ್ಕಂಕೂಡಿತ ದೃಕ್ಕಿಗಂ
ನಿರುತಂ ದೃಕ್ಕಿಸಿಸ್ಥೂಲಕಾರಣ ಮಹಾಸೂಕ್ಷ್ಮದಿತ್ರೈಕಾಯದೊಳ್
ಮೆರೆಸುತ್ತಂ ವರಮಂತ್ರಬೋಧೆ ವಿಡಿಸುತ್ತಾದೇವ ಸೋಪಾನಮಂ
ಭರದಿಂತೋರುವನೆಂಥ ಪುಣ್ಯವರಿಯೈತ್ರೈಲಿಂಗಸದ್ವಾಸವು॥ ೮೩

(ಉತ್ಪಲಮಾಲಾವೃತ್ತ)

ಕಾರಣಕಾಯಲ್ಲಿ ವರಭಾವನಲಿಂಗವ ಸೂಕ್ಷ್ಮದೇಹದೊಳ್
ಮೀರಿದ ಪ್ರಾಣಲಿಂಗವನು ತೋರಿಸುದಿಷ್ಟಸುಲಿಂಗಸ್ಥೂಲಶಾ
ರೀರದಿಬೀರಿ ದೀಕ್ಷೆಯನುಗೈವುತ ತ್ರೈಮಲನಾಶಗೈಯ್ಯುವಂ
ಪೂರದಿಕೇಳು ತ್ರೈವಿಧದಲಿಂಗ ಸುಭೇದವನೆಂದನಾಮುನೀ । ೮೪
ಆಲಿಸುನಿಷ್ಕಲತ್ವದಲಿ ತಾಮಹಲಿಂಗವು ಭಾವಲಿಂಗನುಂ
ಪೋಲ್ತುದು ಭಾವಲಿಂಗಮದು ನಿಷ್ಕಲಪೊಂದುತ ಪ್ರಾಣಲಿಂಗವುಂ
ಪೋಲ್ತುದು ತಾನು ಗೋಚರದಿ ಗೋಚರಲಿಂಗವು ನೇತ್ರದಿಂದೆ ತಾ
ಲೋಲದಿ ನೋಡಲಾಯ್ತುವರದಿಷ್ಟಸುಲಿಂಗವು ಕೇಳ್ನರಾಧಿಪಾ । ೮೫

ಮತ್ತೇಭವಿಕ್ರೀಡಿತವೃತ್ತ

ನಿರುತಂ ಚಕ್ರವನಾಹತಂ ಮಣಿಪುರಮ್ಮಾಧಾರಸ್ವಾಧಿಷ್ಠಮೇ
ಣ್ಣರವೀಶುದ್ಧಿ ಶಿಖಾದಿಯಾಗಿ ನರಪಾತಾವಾರು ತೋರಿರ್ಪವೈ
ಗುರುಲಿಂಗಂ ಮಹಲಿಂಗ ಜಂಗಮದಲಿಂ ಗಾಚ್ಯಾರಲಿಂಗಲ್ಲದಾ .
ವರಪ್ರಾಸಾದದಲಿಂಗ ಮುಖ್ಯ ಶಿವಲಿಂಗಂ ಚಕ್ರದಲ್ಲಿರ್ಪುವೈ । ೮೬

[ಕಂದಪದ್ಯ]

ಮಹಲಿಂಗವೆಂಬುವದೆತಾ
ನಿಹುದೈಶಾರೀರ ಪೂರ್ಣವ್ಯಾಪಿಸುತಿತ್ತುಂ
ಮಹಲಿಂಗಮುಳಿದು ಪಂಚಕ
ವಿಹವೈತಾವಿಂದ್ರಿಯುಂಗಳಾವಾಸಾಗಿ । ೮೭

ವಚನ

ಅಂತುಮಲ್ಲದೆ ತಲ್ಲಿಂಗಗಳೀ ಪಂಚೇಂದ್ರಿಯಗಳಲ್ಲಿ । ೮೮

(ಮತ್ತೇಭವಿಕ್ರೀಡಿತವೃತ್ತ)

ಘನನೇತ್ರಾಂಗದೆ ವಾಸಮಾಗಿಶಿವಲಿಂಗಂ ನಾಸಿಕಾಶೋಭೆಯುಂ
ಮಿಸುಪಾಚಾರಸುಲಿಂಗ ಕರ್ಣದಲಿ ಪ್ರಾಸಾದಾತ್ಮಲಿಂಗಂ ಸದಾ

ಘನಜಿಹ್ವಾಗ್ರದಿ ಶೋಭಿಸುತ್ತ ಗುರುಲಿಂಗಂ ತೋರಿಹೃನ್ಮಧ್ಯದ
ಲ್ಲಿನಿದಾಗಿಪುದು ಜಂಗಮಾರ್ಯನನಘಂ ಲಿಂಗಂಪರಾಧೀಶನೆ । ೮೯

[ಚಂಪಕಮಾಲಾವೃತ್ತ]

ಪರಿಕಿಸೆಲಿಂಗ ನಿರ್ಜನ ನಿರಂಜನಮಷ್ಟದಶಾಂಗುಲಂ ಸದಾ
ದುರಿತವಿನಾಶ ನಿತ್ಯಮಯನಿರ್ಗುಣ ನವ್ಯಯತಾ ನಿರಾಮಯಂ
ಉರುತರಕರ್ಮಸಾಕ್ಷಿವರಭೋಕ್ತ್ರ ನನನ್ವಿತನುಂ ನಗಾತ್ರನು
ಪರಕೆಪರಂಪುದರ್ಶ ಜಗದೀಶನು ಮೋದದಲಿಂಗಮೆಂದನು । ೯೦

ಕಂದಪದ್ಯ

ಇಂತಪ್ಪ ಲಿಂಗವನುನರ
ಸಂತತಶಿರಬಾಹು ಕಕ್ಷೆ ಹೃದಯಾಂತರದೊಳ್
ಶಾಂತಳೆಯುತೆ ಸದ್ಗುರುವಿನ
ಮಂತ್ರದೆ ಪೂಜಿಸಲುಧನ್ಯಜಗದೊಳಗಾತಂ । ೯೧

ಉತ್ಪಲಮಾಲಾವೃತ್ತ]

ಲಿಂಗಮುದಪ್ಪಗಾತ್ರವನು ನೋಡಿಬೆದರ್ಪರು ಕಾಲಕಿಂಕರರ್
ಅಂಗದಕಾಂತಿನೋಡಿ ನೆರೆಮೋದದಿಬಪ್ಪಳು ಮುಕ್ತಿಕಾಂಗನಾ
ಪಿಂಗಿಸಿಜೀವಬಂಧ ಜನನಾದಿಯ ನಾಶವಮಾಡಿ ಲಿಂಗದೊಳ್
ತಿಂಗಳನೇತ್ರ ಸೇರಿಪನುಸತ್ಯವಿದೆಂದನು ಸನ್ಮುನೀಶನು ॥ ೯೨
ಲಿಂಗವೆ ಕಾಂತಕೇಳುಮಹದಂಗವೆ ಕಾಂತೆಯುಲಿಂಗನಿಷ್ಠಗಂ
ಲಿಂಗವಸೇವೆಲಿಂಗ ದೊಡನಾಟವು ಲಿಂಗದಮೇಲೆ ಪ್ರೀತಿಯುಂ
ಲಿಂಗದಶೋಭೆಯಿಂದಿಹನು ಲಿಂಗವಬಿಟ್ಟು ಪುಲಿಂಗಕೂಟಮುಂ
ಭಂಗಿಸುತನ್ಯದೈವನುತಿ ಮಾಡಲುಜಾರೆಯಪೋಲ್ವನಾನರಂ । ೯೩

## ವಚನ

ಇಂತಾಭಕ್ತಂ ತನ್ನಂತರಂಗದೊಳ್ಪಿಂಗದೆ ಲಿಂಗಾಸಕ್ತನಾದೊಡೆಕಂತು ವಿನವೈರಿಸಭೆಯೊಳ್ಪಂದಾಡುವನೆಂದು ಶ್ರುತಿಯುಕ್ತ ಮಿರ್ಪುದದಂ ಲಿಂಗತೇಜಮಿರ್ಪುದೇಂ ಗಹನಂ ಕೇಳ್‌ಲಿಂಗಪೂಜಾಫಲಮನೆಂದಂಮುನಿ ||

( ಕಂದಪದ್ಯ )

ಉರಿಲಿಂಗ ದೇವರೆಂಬುವ
ಚರಮೂರ್ತಿಗಳರಸಗೃಹದೊಳುಪದೇಶವತಾ
ವಿರುಳೊಳ್ಕೊಡುತಿರಲದುತ
ಸ್ಕರಪೆದ್ದಣ್ಣಂತಾಗವಾಕ್ಷದಿಕಂಡಂ । ೯೫

ಮನದೊಳು ಲಿಂಗವಪಡೆಯುವ
ಘನದಿಚ್ಛೆಯಲಂ ದಿನಿರುಳಕಳೆದಂ ಚೋರಂ
ವಿನಯದೆ ಗುರುವಿನಪಾದಕೆ
ತನುವಂ ನೀಡುತ್ತೆಲಿಂಗವಿಕ್ಕುವದೆಂದಂ । ೯೬

## ವಚನ

ಇಂತಪ್ಪತಸ್ಕರ ನಿರವಂ ನೋಡಿಗುರುವರಂ ಕಂಗನೆಕನಲ್ದು ಬಿರಿಪಿಡಿಯೊಳ್ಮಳುಂಗದಕಲ್ಲನೊಂದಂ ಪಿಡಿದುಘೇದಗಡಿ ಜಾಯೆಂದು ಬೈದುಭಂಗಿಸುತಂಬಿಸುಡಲ್ । ೯೭

[ಮತ್ತೇಭವಿಕ್ರೀಡಿತವೃತ್ತ

ದೊರೆದಾಕಲ್ಲನುಲಿಂಗಮೆಂದು ಗುರುತಾನಾಡಿರ್ದುದೇ ಮಂತ್ರಮಂ ದುಕುಮೋದಂ ದಳಿಯುತ್ತ ತಸ್ಕರನವಂ ತಾಮಾಡುವಂ ಪೂಜೆಯು ನ್ನುರದೊಳ್ಸೇರಿಸಿ ನಿತ್ಯಕರ್ಮದಲಿತಾಲೋಲಾಡುತಿರ್ದಂ ಸದಾ ಗುರುವಿತ್ತಾಶಿವಲಿಂಗ ವಿಕ್ರಮುವದೇಂ ತಾನೇನುಸಾಮಾನ್ಯಮೆ

(ಕಂದಪದ್ಯ)

ಇರುತಿರಲಾಪುರದರಸಂ
ಕೆರೆಯಂಕಡಿಸಲಿಕೆ ಪತ್ತುಸಾವಿರನರರಂ
ನಿರುತದಿದಣಿಸುತಲಿರುತಿರೆ
ಕೆರೆಯೊಡಲೊಳ್ಪೊರಟಿತೊಂದು ಯೋಜನಶಿಲೆಯು । ೯೯

(ಮತ್ತೇಭವಿಕ್ರೀಡಿತವೃತ್ತ)

ಮನದೊಳ್ಚಿಂತೆಯ ತಾಳಿಭೂಪನಿರೆತಾಶಿಲ್ಪಾದಿ ಸತ್ಪಂಡಿತರ್
ಘನಸಾಸಂಗೊಳಲೆತ್ತಲಾರದಿರೆ ಜೋತಿಸ್ತ್ಯಾದಿ ಶಾಸ್ತ್ರಜ್ಞರಂ
ಘನಯೋಗೀಶ್ವರ ಸಂಘಮಂ ನೆರಪಿಮೈಯಿಕ್ಕುತ್ತ ಕೇಳ್ದಂ ಮಹಾ
ವನಮಾಲಿ ಪ್ರಿಯರೂಪಶೋಭಿತರೆ ನೀಮ್ಮೇಲೆತ್ತಿರೆಂದಾ ನೃಪಂ । ೧೦೦

(ಕಂದಪದ್ಯ)

ಲಾಲಿಸುರಾಮನೆ ಶಿಲೆಯಂ
ಕೀಳಲುತಾಮಾಡುತಿರ್ಪ ಸಾಹಸವೆಲ್ಲಂ
ಪಾಳಾಗಲುರಾಜಂ ತಾಂ
ಗೋಳಿಟ್ಟನು ಮಹಿಮ ಸಂಘದಿದಿರುರುಳುತಲಿ ॥ ೧೦೧

## ವಚನ

ಆಸಮಯದೆಚರವರ ರುರುಲಿಂಗರನ್ನೀಕ್ಷಿಸಿಪೆಳ್ದಂ ತನ್ನು
ರದಿಪಾರ್ಬಿರಿಗಲ್ಲಾ ಶಿಲೆಯುಮೇಲಿಟ್ಟಂ ಘೇದಗಡಿಜಾಯಂ
ಬಗುರುಮಂತ್ರದಿಂ ಜಪಿಸಲ್ಕೆಯಾಕಲ್ಲಂ ತಲ್ಲಿಂಗಂ
ಗಗನಕೆತ್ತಿಕೊಂಡೊಯ್ಯಲಾಗಲರಸಂ ಕೊಂಡಾಡಿ ಗುರುಭಕ್ತಿಯಂ
ಪಿಡಿದಿರ್ದಪೆದ್ದನಿಗೆ ವಂದನೆಯಂ ನೆಗಳ್ಚಲವನಾ ತನ್ನ ಗುರುವಿಂಗರ್ಪಿಸೆಂದು

ಸುರಿಚಕಿತರಾಗಿ ಸರ್ವಜನಂ ಗುರುಲಿಂಗಮಹಿಮೆಯಂ ಕೊಂಡಾಡು
ತಿರ್ದರರಸಾ ॥ ೧೦೨

(ಕಂದಪದ್ಯ)

ನಿಂದೆಯೊಳಾ ಗುರುಕೊಡೆತಾ
ನಂದಿನದಿನಲಿಂಗತೇಜಮಾಂತಿತುನೃಪಕೇ
ಳಂದದಗುರುಕೃಪೆಲಿಂಗವು
ಮುಂದರಿವಲ್ಲೀನು ಚೋದ್ಯಮೆಂದಂ ಮುನಿಪಂ । ೧೦೩
ಈತೆರವೃಷಭ ಮುನೀಂದ್ರಂ
ಭೂತೇಶನ ರೂಪಲಿಂಗಮಹಿಮೆಯನುಸುರಲ್
ಭೂತಳದೊಳ್ಬೀಳುತನರ
ನಾಥಂಸಾಷ್ಟಾಂಗವನ್ನು ತೋರಿದನವಗೆ । ೧೦೪

## ಗದ್ಯ

ಇದು ಶ್ರೀಮದ್ವೀರಶೈವಾಚಾರ ಧುರೀಣ
ಶಾಂತವೀರದೇವರೊಡಲಬ್ಧಿ ಚಂದಿರಕವಿತಾ
ಮಂದಿರಗುರುಲಿಂಗಕವಿರಚಿತ ಬಸವಜನ್ಮ
ಮಹಾಕಾವ್ಯ ದೊಳ್ಸಪ್ತಮಾಶ್ವಾಸಂ ಸಮಾಪ್ತಂ
ಅಂತೂ ಸಂಧಿಏಳಕ್ಕಂ ಗದ್ಯಪದ್ಯಂಗಳು ಐದು
ನೂರಾಎಪ್ಪತ್ತು ನಾಲ್ಕಕ್ಕಂ ಮಂಗಲಮಹಾ ॥

# ಅಷ್ಟಮಾಶ್ವಾಸ ಪ್ರಾರಂಭ.

## ಚಂಪಕಮಾಲಾವೃತ್ತ

ಕಮಲಜಪಾತ್ರನೇ ಕಮಲನೇತ್ರನೆ ನೀ ಕಮಲಾಕ್ಷಮಿತ್ರನೇ
ಸುಮಶರಕಾಲನೇ ಸುಮನಸೀಲನೆ ನೀ ಸುಮನೌಘಪಾಲನೇ
ಹಿಮಕರಭೂಷನೇ ಹಿಮಜಳೀಶನೇ ನೀ ಹಿಮದದ್ರಿವಾಸನೇ
ತಮಖಳಹಿಂಸನೇ ತಮದಹಿಂಸೆಯಗೈಯ್ತುಮಹಿಂಸಹಂಸನೇ ‖ ೧

ಗಹನನೆಗಾನಲೋಲನೆ ಗಿರೀಶನೆ ಗಿಪ್ಪತಿವಂದ್ಯಪಾದನೇ
ಗುಹಪಿತ ಗೂಢಪಾದಧರ ನೇನುಗೇಳುತ ಸೌಖ್ಯಗೈವಸ
ನ್ಮಹಿಮನೆ ಗೋಪವಾಹನನೆ ಮಂಗಳಗೌರಿಯನಾಥಗಂಗೆಯಂ
ಗಹನದಮೌಳಿಯೊಳ್ಧರಿಸಿದ ಭಕ್ತರಕಾವನೆರಕ್ಷಿಸೆನ್ನನು ‖ ೨

## ವಚನ

ಇಂತುಲಿಂಗಮಹಿಮೆಯಂ ಕೇಳುತರಸಂ ಮಹಾಮೋದಮಂ ಪಡೆದು
ಜಂಗಮ ಮಹಿಮೆಯನ್ನು ಪುರೆಂದಡಗಲ್ ಯತಿಲಲಾಮನಸುರ್ದಂ ‖ ೩

## (ಚಂಪಕಮಾಲಾವೃತ್ತ)

ನರವರಕೇಳು ಲಿಂಗಮುಖತಾನದು ಜಂಗಮ ಜಂಗಮಾರ್ಯತಾ
ಹರಿಯಜಮುಖ್ಯ ವಂದ್ಯನವಿರಾಮಳ ಶೋಭಿತನಾವ ಕಾಲದೊಳ್
ಮೆರೆಯುವಜಂಗಮೇಶ ನೆರೆತೃಪ್ತಿಯಗೊಳ್ಳಲು ಲಿಂಗತೃಪ್ತಿತಾ
ದೊರೆವದಸತ್ಯಮಲ್ಲ ಪರಿಶೋಭಿಪ ಜಂಗಮನೆಂಥಮುಖ್ಯನೈ ‖ ೪ ‖

ಜಂಗಮವೆಂಬ ಶಬ್ದದೊಳಗಿರ್ಪಜಕಾರದಿ ಜನ್ಮಭಾಧೆಯಂ
ಮುಂಗಮವೆಂಬುವಕ್ಕರವು ತಾಂಗಮನಂ ನೆರೆಮಾಳ್ಪದೆನ್ನುತಂ
ಜಂಗಮನಾದ ಬಿಂದುಕಳೆಸಂಯುತ ಜಂಗಮಲೋಕದಾದಿಯಂ ‖
ಜಂಗಮ ಸಚ್ಚಿದಾತ್ಮಕ ಪರಂಪರ ನಿತ್ಯನು ಕೇಳ್ವುದೆಂದನು ೫

[ಕಂದಪದ್ಯ]

ನರನೇಹೆರನೆಂದೆನ್ನುವ
ಕುರುಹಂ ನೆರೆದೋರಿಯರಿವುಗೊಳಿಸುತಲವಗಂ
ಭರದಿಂಭವಬೀಜದಮುರೆ
ಕುರಿಯಂ ಕೊಟ್ಟವನೆ ಜಂಗಮಂ ನರಪಾಲಾ ॥ ೬

ಜಂಗಮವೆ ಜಗದಚೇತನ
ಮಂಗಲಚಿತ್ತಾದಿತಾಣ ಜಂಗಮನೀಕೇಳ್
ಲಿಂಗದ ಮುಖತಾ ಜಂಗಮ ॥
ನಿಂಗಿತವಿದು ನೃಪತಿ ಜಂಗಮಂ ಜಗಭರಿತಂ ॥ ೭

ಗುರುಶಿಷ್ಯರೊಂದೆಯೆಂಬುವ
ಪರಿಯಂ ತೋರಿಸುತಲೊಂದೆ ಸೂತ್ರವ.ಗೊ ಟ್ಟಾ
ಕರಣಪ್ರಸಾದವನೀವಂ
ವರಚರ ಗುರುಲಿಂಗರೂಪ ಜಂಗಮನೆಂದಂ ॥ ೮

ಸ್ಥಾವರಲಿಂಗವ ಪೂಜಿಪ
ಠಾವಿನೊಳಾವ್ಯಾಕ್ಷಿವಯ್ಯ ಜಲಹರಿಬಲದೊಳ್
ನೀವಿಷ್ಟಲಿಂಗ ಜಲಹರಿ
ಯಾವಾಮದೊಳಿಡಲದಂಗ ಲಿಂಗಮದೆನಿಕುಂ । ೯

ಅಂಗವೆ ಲಿಂಗವ್ಮುದಾಗಲು
ಜಂಗಮಪದ ತೀರ್ಥವಿಷ್ಟಲಿಂಗಕೆತೋರ್ರು
ತ್ರಂಗಕೆಕೊಳ್ಳುವೆವದರಿಂ
ಜಂಗಮಜಲವದುವೆ ಸಮತೆಜಲವಾಗುವದು ॥ ೧೦

(ಮತ್ತೇಭವಿಕ್ರೀಡಿತವೃತ್ತ)

ಮುದದಿಂ ಜಂಗಮ ಪೂಜೆಗೈದುಪದದುಂಗುಷ್ಟಾಗ್ರದಿಂತೋರ್ಪಸ
ತ್ಸುಧೆಯಂ ಮೀರುವ ಪಾದವಾರಿಯನು ತನ್ನಂಗಾಂಗದೊಳ್ಪೂಸಲುಂ

ಪದದಿಂ ಪೋಗುತ ಪುಣ್ಯಕ್ಷೇತ್ರದಲಿ ಸ್ನಾನಂಗೈದ ಸತ್ಪುಣ್ಯತಾ
ನೊದಗುತ್ತಾನರನನ್ನು ಶಂಭುಸುತಿಪಂ ತಾನೇನು ಸಾಮಾನ್ಯನೇ ॥ ೧೧

## — ವಚನ —

ಇಂತಾಜಂಗಮ ಮಹಿಮೆಯಂ ನರಪಾಲಗಾ ವೃಷಭಯೋಗೀಶ್ವರಂ
ಪೇಳಲರಸಂ ಸಂದೆಗಂಬಿಟ್ಟು ॥ ೧೨

## ಕಂದಪದ್ಯ

ಎಲೆದೇವ ಕೇಳುಸಮತಾ
ಜಲವಿದು ಜಂಗಮನ ತೀರ್ಥವೆಂಬಿರಿನಿಜದಿಂ
ವಿಲಸಜ್ಜಂಗಮರಿಕ್ಕದೆ
ಮಲಹರ ಗರ್ಪಣವಗೈಯೆರೇಂಕಾರಣಮೋ ॥ ೧೩
ಎನಲಾನರ ಪಾಲನಿಗತಿ
ವಿನಯದೆಪೇಳಿದನು ಯೋಗಿತಾನೆಲೆಭೂಪಾ
ಮನಸಿಜವೈರಿಗೆ ಸಂತಸ
ಘನಮಪ್ಪುದು ಜಗದಜೀವಿತೃಪ್ತಿಯ ಪೊಂದಲ್ ॥ ೧೪

## ಮತ್ತೇಭವಿಕ್ರೀಡಿತವೃತ್ತ

ಪಸಿದಾಜಂಗಮದೇವನಂ ತಣಿಸಲಾಬ್ರಹ್ಮಾಂಡ ಸಜ್ಜೀವಿಗಳ್
ಪಸಿವಂ ನಾಶವಗೈವದೆಂದು ನಿಗಮಂಗಳ್ಪೇಳ್ವವೇನೆಂಬೆನಾಂ
ಪಶುಪಾಲಂ ನೆರೆಮೋದಗೊಂಬನರಸಾ ತದ್ದೇವನಾಸತ್ವಮಂ
ಪುಸಿಯಂಡೆನ್ನದೆ ಲಾಲಿಸೊಂದುಕಥೆಯಂ ನಾಪೇಳ್ವೆನೆಂದಂಮುನಿ । ೧೫

## ಕಂದಪದ್ಯ

ಶೂಲಿಯು ಸಭೆಯೊಳಗಿರುತಿರೆ
ಮೂಲೋಕದಮಾತೆ ಗೌರಿಮನದೊಳ್ತಾಬೇ
ಗಾಲೋಚಿಸೆ ಕೇಳ್ದಳ್ಶಿವ
ಪಾಲಿಸುಗಣತೃಪ್ತಿ ಗೈಯುವಾಜ್ಞೆಯನೆಂದುಂ । ೧೬

ಕೇಳುತಲೀಶಂ ನುಡಿದಂ
ಕೇಳೆಲೆಯುಮೆ ಗಣರತೃಪ್ತಿಗೈಯುವಸತ್ವಂ ||
ಸಾಲದುನಿನಗದಸಾಧ್ಯಂ
ಪಾಲಿಸೆನಾನೆನ್ನನುಜ್ಞೆ ಬೇಡಿದರಾಶೆ || ೧೭

## ವಚನ

ಎಂದಾಪಿನಾಕಿಯುಸುರೆ ದಾಕ್ಷಾಯಣಿಕಡಂಗಿ || ೧೮

## (ಕಂದಪದ್ಯ)

ಪುರಹರ ಕೇಳ್ಗಣತೃಪ್ತಿಯು
ದೊರೆಯಲು ನನ್ನಿಂದೆ ಸಾಧ್ಯವಾಗದೆದೇವಾ
ಸಿರಿಮುಖ್ಯ ವಾಣಿಸಖಿಯರು
ಕರೆದರೆತಾವ್ಬಪ್ಪದಿಹರೆ ನನಗಕಟಕಟಾ || ೧೯
ಯನ್ನಯನಾಮವುನೊದಲಿಂ
ದನ್ನಪೂರಿತಳದೆಂದುನಾಶನುದಾಯ್ತೋ
ಚನ್ನಿಗದೇವನೆ ತಿಳಿನೀಂ
ನಿನ್ನೆದು ರೊಳ್ಗಣರ ತೃಪ್ತಿಯಂ ನಾಂಗೈವೇಂ || ೨೦

## ವಚನ

ಎಂದಾದಾಕ್ಷಾಯಣಿ ಗಣವರರ ಭೋಜನಮಂ ಗೊಳಿಪೆನೆನ್ನವಿಕ್ರಮ ವನ್ನೋಡುನೀನೆನುತಲಭವನಿಗಂ ಮಣಿದೊಡಂ ಬಡಿಸುತನುಜ್ಞೆಯಂ ತಳೆದುಭುವನಕೇಳ್ತಂದು ಶಚಿವಾಣಿಯರುಂಧತಿಮುಖ್ಯದೇವಾಂಗನೆಯರಂ ನೆರಪಿಕಡುಜವದಿಂ || ೨೧

## [ಕಂದಪದ್ಯ]

ಪಾಯಸಪಾಲ್ಗಡಬುಗಳಂ
ಶೀಯಾಗಿಹ ಪಾಕಮೆಲ್ಲವನುಗೊಳಿಸುತಲಾ

ಕಾಯಜವೈರಿಯುಮಡದಿಯು
ತೋಯಜನೇತ್ರೆಯರಕೂಡಿ ಮಾಡುತಿರ್ದಳ್ । ೨೨
ತ್ರೈಲದಿಕರಿದಿಹಪೋಳಿಗೆ
ಕೈಲಾಸವಚುಂಬಿಪಂತೆ ರಾಶಿಯು ತೋರಲ್
ಬೈಲಲಿತಾಣವು ಸಾಲದು
ಶೈಲಜೆಸಾಹಸಕೆ ಬೆರಗುವಟ್ಟಿರ್ದಿವಿಜರ್ । ೨೩
ಅದ್ರಿಗುಪೋಲ್ವನಿತಶನವ
ನದ್ರಿಜೆತಾನೇಕೆಗೈವಳ ಘಟಿತಕಾರ್ಯಂ
ಕ್ಷುದ್ರಿತಸಾಹಸಮಲ್ಲಿದ
ನದ್ರಿಜೆಯಾಣ್ಮಹನೆಬಲ್ಲನೆಂದರ್ಜನತಾಂ । ೨೪

## ವಚನ

ಇಂತನಂತಗಿರಿಗಳಂ ಪೊಲ್ವಕಜ್ಜಾಯಪಾಯಸಂ ಘೃತಕ್ಷೀರ ಕುಂಭಂಗಳಂ ತಾಗಿರಿಜೆನೆಗಳ್ಚಿಪಾಕಗೈವುತಿರಲಾಸಮಯದೆ ಚಿಕ್ಕಗಣನಾಥ ನೆಂಬಷ್ಟವರ್ಷದಣುಗಂಬಂದಂ ॥ ೨೫

## ಚಂಪಕಮಾಲಾವೃತ್ತ

ಗಿರಿಸುತೆಯನ್ನದಾಲಯವ ಪೊಕ್ಕನು ಚಿಕ್ಕಗಣೇಶಬೇಗದಿಂ
ಕರಿಮುಖಮಾತೆ ಶ್ರೀಗಣವರೇಶರು ಭೋಜನಕೆಂದುಬಪೊಡೆ
ನ್ನೊರೆಯಲುಕಳ್ಪಿದರ್ಬರಲಿ ಕಪ್ಪಣೆನೀಡುವದೆಂದುಬೇಡೆಶಂ
ಕರಿಮುದದಿಂಗಣೌಘ ಬರಲೆನ್ನಲು ಬಾಲಕಪೇಳ್ದನಾಕ್ಷಣ । ೨೬
ಪಸಿದೆನು ಮಾತೆ ನೀಡು ಮೊದಲನ್ನವ ನಾನದನುಂಡು ಪೋಗುವೆಂ
ಕಸಿವಿಸಿಯುಪ್ಪುದೌಪನಿವಿನಿಂದಲಿ ತಾಳೆನದನಿತು ಪೊಳ್ತನೆಂ
ದುಸುರಲು ಗೌರಿತಾಮುದದಿ ನೀರೆಯಳೊರ್ವಳಿಗಂದಳನ್ನಮಂ
ಶಿಸುವಿಗೆತಂದು ನೀಡೆನಲು ನೀಡಿದನೀಡಿದ ನುಂಡಚಿಕ್ಕನು । ೨೭

## — ಕಂದಪದ್ಯ —

ಅನಿಮಿಷರಾಯನೆ ಕೇಳ್ವೈ
ಘನಸಾಸದಿ ತಂದುನೀಡಲುಂಡಂ ಚಿಕ್ಕಂ
ವನಿತೆಯರೆಲ್ಲರು ಕೂಡುತ
ಮನದಣಿಯದೆ ತುಂಬಿತುಂಬಿಯನ್ನವತಂದರ್ । ೨೮

## (ಮತ್ತೇಭವಿಕ್ರೀಡಿತವೃತ)

ಎನಿತೊಂದಾರ್ಭಟೆಯಿಂದ ನೀಡಲನಿತುಂ ತಾತಿಂದುತೇಗುತ್ತಲಿ
ವನಿತಾರತ್ನರೆತನ್ನಿರೆನ್ನೆ ಸಖಿಯರ್ಗುಂ ಪಾಗಿತಂದಿಕ್ಕಲಾ
ಗನಿತುಂ ನಾಲದೆ ಚೀರಿಬೇಗಕರೆಯಲ್ ಶರ್ವಾಣಿತಾ ಚೋದ್ಯದಿಂ
ಘನಮೋದಂಬಡೆಯುತ್ತಲನ್ನಬಡಿಸಲ್ತಾನುಂಗಿಬೇಕೆಂದನು । ೨೯

## (ಕಂದಪದ್ಯ)

ಕರೆದಳ್ಗೌರಿಯು ಬೇಗದೆ
ಪರುಷಾನ್ವಿತ ಹಸ್ತವುಳ್ಳನಾರೀಗಡಣಂ
ಸುರಗಿರಿಪೋಲ್ವನಿತಶನವ
ಸುರಿದರು ಗಣನಾಥನುಂಬತಾಣ ದೊಳಾಗಳ್ । ೩೦

ಸರಿಸಿದ ನಂಬರ ಚುಂಬಿಪ
ಗಿರಿಯಂ ಪೋಲ್ವನಿತು ರಾಸಿಯನ್ನವತಾನುಂ
ಡಿರದಿರದೆ ಬೇಗಗಣವರ
ಕರೆಯುತತಾನಂದ ನನ್ನತೀರಿತೆಯನುತಂ । ೩೧

ಏನಿದು ಗಿರಿಜೆಯೆ ನಿನ್ನಯ
ತಾಣುವಿನೊಳಗೊಬ್ಬನೂಟ ಕಿಲ್ಲದೆಹೋಯ್ತೆ ॥
ನೀನಿತ್ತಿ ಹೆಗಣಸಂಘಕೆ
ತಾನೂಟಮದೆಂತು ತಿಳಿಯಲಾಯಿತು ಸತ್ವಂ । ೩೨

## ವಚನ

ಇಂತೆಂದಾ ಚಿಕ್ಕಗಣವರೇಶನ ವಾಕ್ಯವನಾಕರ್ಣಿಸಿಗಿರಿಜೆಯನ್ನದ ರಾಶಿಗಳೆಲ್ಲ ವಂಬಳಿದು ಚಿಕ್ಕನವುಂದಿಡಲ್ತಾನುಂಗಿ ಮತ್ತುಂಬೇಕೆನಲ್ ೩೩

( ಕಂದಪದ್ಯ )

ತ್ತಿಸ ಕೋಟಿದೇವತೆ
ಗಿತ್ತಿಪೆ ನೀಯನ್ನವೆಂದು ಮನದೊಳಗಂ ನಾ
ನತ್ಯಂತಮುದವ ತಾಳಿದೆ
ನೆತ್ತಡಗಿತು ನನ್ನಸತ್ವವೇ ಗೈವೆಂನಾಂ । ೩೪
ಗರ್ವದಿಬಂದೆಂ ಶಿವಶಿವ
ಸರ್ವರಭೋಜನವ ಗೊಳಿಪೆನೆಂದುಬ್ಬಿನೊಳಾಂ
ಶರ್ವನೆ ಪಾಲಿಪುದೆಂದೆನ
ಲುರ್ವಪ್ರಕಾಶದಲಿ ದೇವರೂಪಂ ತೋರ್ದಂ । ೩೫

## ವಚನ

ಆಗಳಾಗಿರಿಜೆಯ ಪಶ್ಚಾತ್ತಾಪಮಂ ಕಂಡು ಮನುಮಥಧ್ವಂಸಂನಿಜ ರೂಪಮಂ ತೋರಲಾಕುಧರಾತ್ಮಜೆಯ ಜ್ಞಾನಭಾವವನ್ನುಳಿದುತನ್ನಂತಾಂ ಜೆರೆಯುತಿಂತಿಂದಳ್ । ೩೬

( ಕಂದಪದ್ಯ )

ಪಾಪಾತ್ಮಳು ನಾನಿನ್ನಯ
ಶ್ರೀಪಾದದಮುಂದೆ ಹಮ್ಮುತೋರಿದೆನಕಟಾ
ಕಾಪಾಲಿಯೆ ಗಣತೃಪ್ತಿಯ
ನೀಪಾಲಿಸುದೇವನನಗಸಾಧ್ಯವಿದೆಂದಳ್ । ೩೭
ಛಲಮಂ ಮಾಡಿದೆನೆಂದುಂ
ಛಲಮಂ ನೀಮಾಡಬೇಡ ಪಾವನನಾವಾ

ನಿಲದೀಗಳೆ ಗಣವರರಾ
ಬಲಮೆಲ್ಲವ ತೃಪ್ತಿ ಬಿಡಿಸುನವಿಪರಬಂಧು । ೩೮
ಎನೆಕೇಳ್ದು ಹರನುಮನದೊ
ಳ್ಮನಿಸಂ ನೆರೆಪೂಣ್ಣಿಗಣಗ ತೃಪ್ತಿಯುದಾಯ್ತ್ರಿ ॥
ಚಿನುಮಯ ಚಿಸ್ಕಂಭುಂಜಿಸೆ
ಮನದನುತಾಪವನು ದೇವಿಸೀನಳಿಯೆಂದಂ । ೩೯
ಲಾಲಿಸುಪಾರ್ವತಿ ಚಿಕ್ಕನ
ಲೀಲೆಯನೇನೆಂದು ಪೇಳ್ವೆತನ್ನೂಟದೆತಾ
ಮೂಲೋಕದ ಜೀವಿಗಳಂ
ಸಾಲಾಗಿಯೆಭೋಜನವನು ಗೈಸಿದನಾತಂ । ೪೦
ಗಣವರರಮಹಿಮೆತಿಳಿಯ
ಲ್ಕಣುವಾದರು ಸಾಧ್ಯಮಲ್ಲತಿಳಿನೀನದರಿಂ
ಮಣಿವುದುಮಹೇಶಭಕ್ತರ
ಗುಣಗಳಬಣ್ಣಿಸಲುಶಕ್ಯಮಲ್ಲೆಲೆಗೌರಿ ॥ ೪೧

## ವಚನ

ಎಂದಾಶಂಕರನರುಹೆಕುಧರಾತ್ಮಜೆ ತಾನಿದು ನಿಜವೊಪುಸಿಯೋ ಪರಕಿಸಬೇಕೆಂದು ಪೊರಟುಸುರಲೋಕಮಂ ಕಂಡು ನಿರ್ಜರ ಕುಲಮಂ ಭೋಜನಕೆ ಕರೆಯಲವರೆಲ್ಲರೀಗನಿಮ್ಮಯಭುವನದೊಳ್ಭಂಜಿಸಿದವೆನಲ್ಪನ ಚೋದ್ಯಬಟ್ಟು ಧರೆಯೊಳ್ಪಾತಾಳದೊಳ್ಗಿರಿಗಂಹರದೊಳಿರ್ದನರದೈತ್ಯನಾಗರರಂ ಸಿದ್ಧಸಾಧ್ಯರಂ ಮನುಮುನಿಗಳಂ ವಿಚಾರಿಸಲ ವರೀಗಚಿಕ್ಕಗಣನಾಥಂ ಭೋಜನವಗೊಳಿಸಿದನೆಂದುನುಡಿಯಲಚ್ಚರಿಬಡುತ ಗಣವರರಮಹಿಮೆಯಂ ಕೊಂಡಾಡುತ ಬರಲಾಮಾರ್ಗದೊಳ್ ॥ ೪೨

[ಕಂದಪದ್ಯ]

ಸುರನಾಗದೈತ್ಯಮರ್ತ್ಯನರ
ವರಸಿದ್ಧರುತೋಷದಿಂದ ಭೋಜನಗೈದುಂ
ಪರಮಾನಂದದಲಿರ್ಪಕು
ಭರದಿಂ ಪಶುಪಕ್ಷಿ ಜಲಚರಂಗಳಕರೆವೇಂ ॥ ೪೩

ನೋಡುವೆನಾಗಣನಾಥನ
ಗಾಢದನುಹಿಮೆಯದು ತಾನದೆಂತಿಹುದೆಂಬೀ
ರೂಢಿಯುಪಶುಗಣಕರೆಯಲ್
ನೋಡಿಲೆಯನಿಮಿಷನೆ ತೋರಿತೊಂದಚ್ಚರಿಯು । ೪೪

ಬಂಡೆಯುಪೊಡರೊಳಗಿರುತಿಹ
ಮಂಡೂಕಮದೊಂದು ಶಬ್ದವಾಕ್ಷಣದೋರಲ್
ಕಂಡಳ್ಪಾರ್ವತಿನಾನಿವ
ಕೊಂಡೊಯ್ವೆಂ ನನ್ನಭುವನಭೋಜನಕೆಂದಳ್ । ೪೫

ಪಿಡಿಯಲ್ಕಕ್ಷಿಯು ನಯದಿಂ
ದೊಡೆಯಳೆನನ್ನೂಟವಾಯ್ತು ಗೌರಿಯವುನೆಯೊಳ್
ಬಿಡುನನ್ನನೆನ್ನಲುಮೆತಾ
ನೊಡಲಂಸೀಳುತಲಿ ತನ್ನಪಾಯಸ ಕಂಡಳ್ । ೪೬

## — ವಚನ —

ಆಗಳಾಮಂಡೂಕಮಂ ಮುನ್ನಿನವೋಲ್ಕೃಪೆಯಿಂದಿಳುಹಿ ಗಣವರರ ತೃಪ್ತಿಗೈದಡೆ ಜಗತೃಪ್ತಿಯಪ್ಪುದುನಿಜಮೆಂದುತಾನಗಜೆಶಂಕರನನ್ನೊಡಗೂಡಿಯಾಜಂಗಮರಮಹಿಮೆಯಂ ಕೊಂಡಾಡುತಿರ್ದಳದಕೆ ಪುರಹರಂ ಗಣವರರಮುಖದೆ ಸರ್ವಜೀವಿಗಳ ತೃಪ್ತಿಗೈಸಿತಾನಶನಮಂ ಕೊಂಬನೆಲೆಯನಿಮಿಷ ತಿಳಿಯಂತಿರ್ಪುದೀಜಂಗಮಮಹಿಮೆಯೆಂದೆನಲ್ ಪರಮಾನಂದದಿಂ । ೪೭

### ಕಂದಪದ್ಯ

ಇಂತಪ್ಪ ಜಂಗಮುದಬಲ
ಕಂತುವಿನಾರಾತಿ ಗರಿದುದಲ್ಲದೆನಾನೀ
ಗೆಂತುಸುರುವೆ ನಿನಗದುಕೇಳ್
ಮುಂತಿಹಭಸಿತವನು ಪೇಳ್ವೆನೆಂದಂ ಮುನಿಪಂ । ೪೮

### (ಮತ್ತೇಭವಿಕ್ರೀಡಿತವೃತ್ತ)

ಎನಿತಾಂಬಣ್ಣಿಪೆ ಭಸ್ಮಪಾವನತೆಯುಂ ತಾನಾವನಾಗಿರ್ದೊಡಂ
ದಿನನಾಥೋದಯ ಪೂರ್ವದೆದ್ದು ಮಲಮೂತ್ರಾದ್ಯಂಗಳಂತೀರ್ಚಿಸಿ
ಮನೆಯೊಳ್ಪಾದ ಕರಂಗಳೆಲ್ಲತೊಳೆದುಂ ಕರ್ಮಂಗಳನ್ನಾರ್ಜಿಸಿ
ಮನಶುದ್ಧತ್ವದಿ ಮಂತ್ರವಾರಿಯಲಿ ಸ್ನಾನಂಗೈಯುಬೇಕೆಂದನು । ೪೯

### (ಕಂದಪದ್ಯ)

ಬಳಿಕಂ ಲಿಂಗಾರ್ಚನೆಯಾ
ಸ್ಥಳಮಂ ಸಾರಿಸುತರಂಗವಲ್ಲಿಯನೆಳದುಂ
ಮಲಹರ ದಿಗ್ಮುಖಪೀಠದೆ
ವಿಲಸತ್ಪದ್ಮಾಸನದಿತಾನು ಮಂಡಿಸಬೇಕೈ ॥ ೫೦

ರಾಯನೆ ಕೇಳಾಗಳ್ತಾ
ಕಾಯಜಹರಮಂತ್ರ ಜಪವಮಾಡುತ್ತಲವಂ
ತೋಯುವ ನಿರ್ಮಲ ಕುಸುಮುವ
ಕಾಯುಲು ಬೇಕಾಗಶಿವನ ಪೂಜೋತ್ಸವಕೆ ॥ ೫೧

### ಉತ್ಪಲಮಾಲಾವೃತ್ತ]

ಪೂಜೆಯುಪೂರ್ವದೊಳ್ಭಶಿತಮಂ ನೆರೆಸ್ನಾನವ ಮಾಡಬೇಕುತಾ
ಮೂಜಗಪುಣ್ಯಮಪ್ಪವರ ಶಂಕರನಕ್ಷಿಯ ಮಾಲೆಯಾಂತುಮೇ

ತ್ತೇಜವಗೈಸಿ ಭಸ್ಮದಲಿ ಪೂಜೆಯುವಸ್ತುಗಳೆಲ್ಲ ಶುದ್ಧಗೈ
ದೋಜೆಯು ತೋರ್ಪಧ್ಯಾನವನು ಸಾಗಿಸಬೇಕೆವ ನೆಂದನಾಮುನಿ ।
ಭಸ್ಮದಭೇದ ವೈದುತೆರಮಿರ್ಪುದು ಭೂತಿಯುಭಸ್ಮಕ್ಷಾರವು
ವಿಸ್ಮಯಶೋಭೆಯಿರ್ಪಭಸಿತಂ ವರರಕ್ಷೆಯಿದೆಂಬರೀತಿಯಿಂ
ಕಶ್ಮಲವಳ್ದ ಶುಭ್ರತನುಕ್ಷೀರಸುಪೂರಿತ ಗೋವಿನಿಂದಲಿ
ಭಸ್ಮವಮಾಳ್ಪುದೀಜಗದಿ ತಾನದರಿಂ ಸಲೆ ಮಾನ್ಯಮಪ್ಪುದು ॥ ೫೩

## (ಮತ್ತೇಭವಿಕ್ರೀಡಿತವೃತ್ತ)

ಗಿರಿಜೇಶಾನನ ದೊಳ್ಕರಂಗೊಳಿಪ ಸದ್ಯೋಜಾತ ಸದ್ವಕ್ತ್ರದಿಂ
ಧರೆತಾಂ ಪುಟ್ಟಿತು ಪೃಥ್ವಿಯಿಂದಲುದಯುಂ ನಿರ್ವೃತ್ತಿ ತಾನಾದುದು
ವರನಿರ್ವೃತ್ತಿಯೊಳಂದು ತಾನುದಯಮಂ ಪೊಂದಿತ್ತುಗೋನಂದನಂ
ಪರಿಶೋಭಾನ್ವಿತವಾದ ಭೂತಿಯದು ತಾನಾಗೋವಿನಿಂ ಟ್ಟಿತು । ೫೪

## [ಚಂಪಕಮಾಲಾವೃತ್ತ]

ಹರಗಿಹ ವಾಮದೇವಮುಖದಿಂ ಜಲಪುಟ್ಟಿತು ತಜ್ಜಲಾಂಗದಿಂ
ದೊರೆಯಿತು ಸುಪ್ರತಿಷ್ಠಕಲೆ ಯಾಕಲೆಯಿಂದಸಿತಾಂಗ ಭದ್ರೆಗೋ
ವೆುರೆಯಿತುಭದ್ರೆಯಿಂ ಭಸಿತಮಾಘನ ತತ್ಪುರು ಷಾಖ್ಯವಕ್ತ್ರದಿಂ
ದಿರದೆಸುಶಾಂತಿ ಶುಭ್ರಕಳೆಗೋವು ಸುಶೀಲೆಯಲಿಂದಕ್ಷಾರವು । ೫೫
ಪೊಳೆಯುವ ಘೋರವಕ್ತ್ರದಲಿ ತೇಜಮುದಕ್ಕುರೆ ವಿದ್ಯೆಯುದ್ಭವಂ
ಸುಳಿದುದುವಿದ್ಯೆಯಿಂ ಸುರಭಿಕೇಳದರಿಂದಲಿ ಭಸ್ಮಪುಟ್ಟಿತ್ತೈ
ನಲಿಯುವ ದೀಶನಾಸ್ಯದಲಿ ಬಾನ್ಕಲಿಶಾಂತಿಯುತೋರಿ ಶಾಂತಿಯಿಂ
ದಲಿಯಿತು ಚಿತ್ರವರ್ಣಸುಮನಂ ಸುಮನಾಂಗದಿ ರಕ್ಷೆಯಾದುದು । ೫೬

## ವಚನ

ಇಂತಪ್ಪಾಪಂಚಭೂತಿ ಧರನಾಗಲ್ ॥ ೫೭

## ಮಲ್ಲಿಕಾಮಾಲಾವೃತ್ತ

ಆವಭಸ್ಮವನಾಗೆ ಶಾಸದ ಗೋಮಯಾಂಗದಿಮಾಡುತ
ಲಾವಕಾಲದೆ ತಾನುಧಾರಣಗೈಯೆ ಪಾತಕವಿಲ್ಲವೈ
ಆವಜನ್ಮಿತನಾಗಲಾನರ ನೋವಿಭಸ್ಮವನಿಕ್ಕಲು
ಭಾವಜಾರಿಯೊಳೈಕ್ಯವೊಂದುವ ನಾವಸಂದೆಗಮಿಲ್ಲವೈ । ೫೮

## ಕಂದಪದ್ಯ

ಭೂಮಿಯಲಿ ಪುಟ್ಟಿತೋರುವ
ಕಾಮಿತಘನವಸ್ತುವೆಲ್ಲ ಭೂಮಿಯೊಳಡಡಗು
ತ್ತಾಮಾಯಪುಪ್ಪತೆರದಿಂ
ದಾ ಮಾಹೇಶನಲಿ ತೋರ್ಪಪವವನೊಳ್ಲಯವು । ೫೯

ಎಲ್ಲರಿಗೆ ಸುಖನಕೊಡುತಿಹು
ದೆಲ್ಲಾದುಃಖವನು ದೂರಗೈವುದುಭಸ್ಮಂ
ಎಲ್ಲರಮತವಿಹುದರಿನೀ
ನೆಲ್ಲಕ್ಕುಂ ಭಸ್ಮತಾನೆಮಿಗಿಲೆನಿಸಿಕ್ಕುಗಂ । ೬೦

ಮನುಮುನಿಗಳ್ಸುರ ನರವರ
ರನಿತೆಲ್ಲರು ಭಸ್ಮಮಹಿಮೆಯಂ ತಾವರಿದುಂ
ತನುವಿಗೆ ಧಾರಣಗೈವರು
ಮನಸಿಜನಂತಕನ ಪ್ರೇಮಮುಪ್ಪುವತೆರದಿಂ । ೬೧

ಲಾಲಿಸು ಭೂಪನೆ ಮುನ್ನಿನ
ಕಾಲದೆಮೌನೀಶ ಭದ್ರಗಾಯಕನೆಂಬಂ
ಲೋಲದೆಸಂಬುತ ಭಸ್ಮವ
ನಾಲೋಕಿಸದಿರ್ದನನ್ಯವಸ್ತುವ ಮನದೊಳ್ । ೬೨

ಗಾಯನವಮಾಡುತಭಿಕ್ಷದೆ
ತಾಯೆಸಿತುಂ ಬರ್ಪುದನಿತರಿಂ ಮುದದೊಳಿರ
ಲ್ಕಾಯತಿಯ ಮುಡದಿಕಷ್ಟದೆ
ಬಾಯಂ ಬಿಡುತಿರ್ದಳನ್ನ ಸಿಗದಿರ್ದುದಕೆ ॥ ೬೩

ಪರಿಪರಿಬಡತನತಾಮಂ
ದಿರದೊಳ್ಕೆಲಿಸಿರ್ದು ಪತಿಯುಮೋದದೊಳಿರ್ಪಂ
ಪರಸಮುದಲ್ಲೆನುತಲಿತಾ
ತರುಣಿಯು ಪೇಳಿದಳು ತನ್ನಮನ ಚಿಂತೆಯನು । ೬೪

ಎಲೆನಾಥನಿನ್ನ ಗಾಯನ
ದುಲಿಯಂ ನೆರೆಮಾಣು ನೋಡುಮನೆಯಲ್ಲೇನುಂ
ಸಲೆಕಾಣದು ಸಿರಿವಂತರ
ಬಲುಸಾಹಸಗೈದು ಧನವಗಳಿಸುವುದೆಂದಳ್ । ೬೫

## ವಚನ

ಇಂತಾನ್ನಾರಿಯಾಭದ್ರಗಾಯಕನಿಗತ್ಯಂತಾಗ್ರಹಮಂ
ಮಾಡಲವನಿಂತೆಂದಂ ೯೬

## ಚಂಪಕಮಾಲಾವೃತ್ತ

ಅರಿಯೆಲೆನಾರಿಬೇಡಧನದಾಶೆಯು ಸರ್ವವು ಭಸ್ಮದಲ್ಲಿದೆ
ಧರಿಸುತ ಭಸ್ಮಸೇವನೆಯಗೈಯಲು ಸಂಕಟ ದೂರಗೈವುದು ॥
ಪುರಹರ ನೀಕ್ಷಿಸುತ್ತ ನಿನಗೀವನು ನೋಕ್ಷವನಂಬುನಂಬುನೀ
ಸಿರಿಯಿದು ನಿತ್ಯವಲ್ಲಕ್ಷಣ ಭಂಗಮದಪ್ಪುದು ಭಸ್ಮವೇಸ್ಥಿರಂ । ೬೭

## [ಕಂದಪದ್ಯ]

ಈಪರಿವಾದವ ಮಾಡುತ
ಮೂಪುರಹರ ಭಸ್ಮಸಿರಲದೊರ್ವಂಧನಪಂ
ತಾಪಸವರ್ಯರಿಗೆಂದಂ
ನೀಪೇಳಿಭೊದಿಪುದುದೇವ ಸಿನ್ನಯಗಾನಂ ॥ ೬೮

ನಿನ್ನಯಗಾನವ ಕಲಿಸಲು
ಭಿನ್ನಂ ಮಾಡದಲೆಕೊಡುವೆ ಸಾಸಿರಪೊನ್ನಂ
ನಿನ್ನಂನಂಬಿದೆನೆಂದಂ
ದುನ್ನತಭಕ್ತಿಯಲಿ ಬೇಡಲಾತನಿಗೆಂದಂ ॥ ೬೯

ಬರಲಾರದುನಿನಗೀಗೀ
ವರವಿದ್ಯಂ ನಿನಗೆನಾನು ಧನದಾಶೆಯಲಿಂ
ಪರಿಬೋಧಿಸೆ ಮನವೊಪ್ಪದು
ಸಿರಿಯೊಡೆಯನೆಪೋಪುದೆನ್ನಲಾ ಮುನಿಮಡದಿ ॥ ೭೦

ಬದಗಿದೆ ಭಾಗ್ಯಂನಮಗದ
ನೊದೆಯುವರೇ ನಾಥ ನಿನಗೆ ದುರ್ಮತಿಯುಂಟೆ
ಸದಯದೆ ಬೋಧಿಸುಗಾಯನ
ಸದನಂನೆರೆ ತುಂಬುತಿರ್ಪ ಭಾಗ್ಯವನೋಡೈ ॥ ೭೧

## ವಚನ

ಇಂತೆನುತಾಮಡದಿಯಾಗ್ರಹಮಂ ಮಾಡಲಾಮುನಿಪನೆಂದನೆಲೆ
ತರುಣಿ । ೭೨

## (ಕಂದಪದ್ಯ)

ಧನಮೆಂಬ ಘನಪಿಶಾಚಿಯು
ಮನಮಂ ಸೆಳಕೊಂಡು ನೀನು ಬಡಬಡಿಸುವೆಕೇ
ಳ್ವಿನುಮಯನ ಮಹಿಮೆ ತೋರುವೆ
ಘನಭಸ್ಮದಘಟ್ಟಿಗಳನು ತಾರೆಂದೆಂದಂ । ೭೩

ಏನಿದೆಭಸ್ಮದ ಪುಡಿಯೊ
ಳ್ತಾನೇ ಬರಿಬೂದಿಯೆಂದು ನಾಥಂಗಿಡಲಾ
ಮೌನಿಪಭಸ್ಮವಕೊಂಡುಂ
ತಾನೇಶಿವಧ್ಯಾನವನ್ನುಗೈದಂಮನದೊಳ್ । ೭೪

## [ಚಂಪಕಮಾಲಾವೃತ್ತ]

ಎಲೆಎಲೆನಾರಿ ನೀಂ ಪಿಡಿದುಕೂಲವ ತೋರುವೆ ಭಸ್ಮದರ್ಪಮಂ
ಸುಲಲಿತ ಭಸ್ಮಮಂ ಮನದೆ ಧ್ಯಾನಿಸುದೇವನನೆಂದು ಪೇಳುತಂ
ಬಲಕರದಿಂದ ಮುಚ್ಚಿಪುಡಿಗೈಯಲು ಬೀಳ್ದವುರನ್ನಚಿನ್ನಗಳ್
ಲಲನೆಯುಮೋದದಿಂ ಮಣಿದು ಭಸ್ಮವನಂಬುತ ಪಾರುಗಂಡಳು ‖ ೭೫
ಧರಣಿಪಯೋಗಿನಾರಿ ಸಿರಿಯುಂಧರೆಯುಂ ತನುವೆಲ್ಲನಾಶವೆಂ
ದುರುತರ ಭಸ್ಮವೇಸ್ಥಿರವದೆನ್ನುತ ನಂಬುತಭ್ರಾಂತಿಯೆಲ್ಲಮಂ
ಮರೆಯುತ ತನ್ನವಲ್ಲಭನ ಗಾಯನಕೇಳುತ ಸೇವೆಮಾಡುತಂ
ಪುರಹರಲೋಕಮಂ ಬೆರೆದಳಲ್ಲದೆ ಪೇಳುವೆನೆಂದನಾಮುನಿ । ೭೬

### ಕಂದಪದ್ಯ.

ಭೂಪನೆ ಲಾಲಿಸು ಭಸ್ಮವು
ವ್ಯಾಪಿತಮಾಗಿರ್ದ ಜೀವಿಪುಣ್ಯವಪೇಳ್ವೆಂ
ಆಪರದೇವನವಾಸಂ
ಶ್ರೀಫಲಸನ್ನಿಬಿಡ ಕಾಶಿಕಾಪುರದಲ್ಲಿ ‖ ೭೭
ಸೊಡಬಲಿಯೊಳಿರುವ ಭಸ್ಮದೆ
ನಡೆದಾಡಿದ ಶ್ವಾನವೊಂದು ನೃತಗರ್ಧಭಪೇ
ರೊಡಲಂ ಪರಿಯುತ ಭಕ್ಷಿಪ
ತಡೆಯೊಳ್ಗರ್ಧಭಗೆ ಭಸ್ಮಧಾರಣವಾಯ್ತು ‖ ೭೮
ಶುನಕನಪಾದದಭಸ್ಮಂ
ತನುವಿಗೆ ತಾಮೂಡಲಾಗಿಗರ್ಧಭನನ್ನಾ
ಚಿನುಮಯದೇವಂ ತೋಷದೆ
ಮಿನುಗುವ ಕೈಲಾಸ ಕೊಯ್ದರಾಯನೆಕೇಳ್ವೈ । ೭೯

## — ವಚನ —

ಇಂತಾಮುರಣೋನ್ಮುಖಮಾದಗರ್ಧಭಂ ಭಸ್ಮಧಾರಣವನಜ್ಞಾನದಿಂ
ದಾದೊಡಂ ಮಾಡೆಕಂತುಹರಂ ಮೆಚ್ಚಲ್ಮಹಾಭಸಿತಮಂ ನೆರೆಭಕ್ತಿಯಿಂಧ
ರಿಸಿದನಾದೊಡೆಭಸಿತಾಂಗಂ ಮೆಚ್ಚಲೇಂ ಚೋದ್ಯಮೆನೆಧರಾನಾಥನತ್ಯಂತ
ಹರ್ಷಿತನಾಗಿ ತನ್ಮುನಿಯಂ ಕೊಂಡಾಡಿ ರುದ್ರಾಕ್ಷಿ ಮಹಿಮೆಯನ್ನಿರೂಪಿ
ಸೆಂದು ಪೊಡಮಡಲ್ಮುನಿ ಮೌಳಿಯುಸುರಿದಂ || ೮೦

## ಗದ್ಯ

ಇದು ಶ್ರೀಮದ್ವೀರ ಶೈವಾಚಾರಧು ರೀಣಶಾಂತವೀರ ದೇವ
ರೊಡಲಬ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ
ರಚಿತ ಬಸವಜನ್ಮ ಮಹಾಕಾವ್ಯದೊಳಷ್ಟಮಾ
ಶ್ವಾಸಂ ಸಮಾಪ್ತಂ ಅಂತೂಸಂಧಿ ಎಂಟ
ಕ್ಕಂ ಗದ್ಯಪದ್ಯಂಗಳಾರು ನೂರಾ
ಐ ವ ತ್ತು ನಾ ಲ್ಕ ಕ್ಕಂ
ಮಂ ಗ ಲ ಮ ಹಾ

# ನವಮಾಶ್ವಾಸ ಪ್ರಾರಂಭ.

## ಉತ್ಪಲಮಾಲಾವೃತ್ತ]

ಕಲ್ಲಿನೊಳಿಟ್ಟವಂಗೊಲಿದ ಮಂಕಹಶಂಕರನೆಂದು ಪೇಳ್ವರು
ಬಿಲ್ಲಿನೊಳಿಕ್ಕಿದಂಗೆ ಪೊಸದಾಯುಧ ಕೊಟ್ಟಿಹನೆಂದುಸುರ್ವರು
ಕಾಲಿನೊಳೊದ್ದವಂಗೆ ಸುಖದಾಲಯ ಮಿತ್ತಿಹನೆಂದು ತೋರ್ಪರು
ಬಲ್ಲರು ಮಂಕರೇನದಕೆ ಭಕ್ತಿಯೆಕಾರಣಮೆನ್ನರಕ್ಷಿಸೈ ॥ ೧ ॥

ನಿಂದೆಯಪದ್ಯವೆಂದು ಖತಿಬೇಡವು ಶಂಕರಮುನ್ನಿನಾರ್ಯರು
ಸುಂದರಬಾಲಕಂಗಸಿತಚಿನ್ನವ ಪಣ್ತುರುಗಳ್ಗೆಬಾರ್ಗೆಯಂ
ಮುಂದರಿವೆತ್ತುಗಳ್ಗೆಕರಿಗಣ್ಣಿಯ ತೇರಿಗೆ ಹಾಶ್ಯಚಿತ್ರವಂ
ಹೊಂದಿಸಿದೃಷ್ಟಿಗುಂದನಳಿದಂ ತೆನೆಗಳ್ಚಿದೆ ಪೊಂದುನೋದವಂ । ೨

## ಕಂದಪದ್ಯ

ರಾಯನೊಳಂ ಯತಿಯುಸುರಿದ
ನಾನೆನಿತೆಂದೇನು ಪೇಳ್ವೆರುದ್ರಾಕ್ಷಿಯುತಾ
ಕಾಯಜ ಹರಮುನ್ನಿನ ತ್ರಿ
ತಾಯುಗದೊಳ್ಮಾಡಿದಂಥ ಲೀಲೆಯಲಾಯ್ತು । ೩

## ಚಂಪಕಮಾಲಾವೃತ್ತ

ಅಸುರರು ಮುಪ್ಪುರಂಗಳಲಿ ಚಕ್ರದಪೊಲ್ತಿರುಗುತ್ತಲಿರ್ಪುದಂ
ಭಸಿತಸುಗಾತ್ರ ಭೇದವನುಗೈಯಲು ವೇದಗಳಶ್ವಪುಂಖತಾ
ನಸುರರವೈರಿ ಭೂಮಿರಥ ಬ್ರಹ್ಮನೆಸಾರಥಿಮೇರುಧನ್ವದಿಂ
ದೆಸೆಯುತ ರೋಷಗೊಳ್ಳೆನಯ ನತ್ರಯದಿಂದುರೆ ಕೋಪವಾರಿಯು ।

## (ಮತ್ತೇಭವಿಕ್ರೀಡಿತವೃತ್ತ)

ಸುರಿಯಲ್ಕೋಪದವಾರಿಯಿಂದಲುದಯಂ ತಾನಾದರುದ್ರಾಕ್ಷಿಯು
ನ್ನರಿಯಲ್ಕಾಸಿರಿಯಾರ್ಗೆ ಗೋಚರವು ಕೇಳ್ಭೂಮೀಶರುದ್ರಾಕ್ಷಿಯಂ
ಶಿರದೊಳ್ಮೂರನು ಕರ್ಣಕೊಂದುಗಳದೊಳ್ಮುನ್ನತ್ತು ಮೂರ್ಕಂಠದೊಳ್
ಭರದಿಂನೂರರಮೇಲದೆಂಟು ಧರಿಸಲ್ಮಾರಾರಿ ತಾಮೆಚ್ಚುವಂ || ೫

ಶಿರದೊಳ್ಧಾರಣಮಾಡಲೀಶದೃಗಮಂ ತಾನಾದಪಾದಾಗ್ರಕಂ
ಶಿರಮಂಬಾಗದೆ ಹಸ್ತದಲ್ಲಿ ಧರಿಸಲ್ಭಿಕ್ಷಾಟನಂ ಗೈಯದಂ
ತುರದೊಳ್ ಶೋಭಿತಮಾಗಲನ್ಯಸುರ ಸಂಘಕ್ಕಡ್ಡ ತಾಂ ಬೀಳದಂ
ತುರೆಸದ್ದರ್ಪಮದುಳ್ಳೊಡಿಂಥ ತಲದೊಳ್ತಾ ನಿಕ್ಕಬೇಕೆಂದನು | ೬

## ( ಕಂದಪದ್ಯ )

ತಿರುಗುವಮೂರು ಪುರಂಗಳ
ಪುರಹರತಾದಹಿಸಿದಂತೆ ಯಾತನನಯನಂ
ದುರಿತವದಹಿಸುತ ಮೆರೆವವು
ನರಪತಿನೀ ಕೇಳು ರುದ್ರನಕ್ಷಿಯ ಫಲಮಂ | ೭

ದೇವರಿಗಿರ್ಪುದುಜಾಗ್ರಂ
ಸ್ಥಾವರಕೆ ಸುಷುಪ್ತಿಯೊಂದೆ ಮತ್ತಾತಿರ್ಯಗ್
ಜೀವಿಗೆಜಾಗ್ರಂಸ್ವಪ್ನಂ
ಭಾವಿಸಲಿವು ಮೂರುನರರ ಜನ್ಮದೊಳಿಹವೈ || ೮

## (ಉತ್ಪಲಮಾಲಾವೃತ್ತ)

ಎಲ್ಲರದುಃಖವಂ ಕಳೆವರುದ್ರನ ನೇತ್ರವನಾರು ಬಣ್ಣಿಪರ್
ಬಲ್ಲಿದಮಾಯೆಯಂಕಳೆದು ಜ್ಞಾನದಮಾರ್ಗವ ತೋರ್ಪಭಾನುನೇ
ತ್ರಲ್ಲದೆ ಮೋಹಕಾನನವ ತಾಂದಹಿಸುತ್ತಿರಲಗ್ನಿನೇತ್ರವೈ
ನಿಲ್ಲದೆ ಚಂದ್ರನಕ್ಷಿ ಕರಣಂಗಳಿಗೀವುದು ತನ್ನಚಂದ್ರಿಕೆ | ೯

(ಕಂದಪದ್ಯ)

ಈ ತೆರನಾಶಿವನಕ್ಷಿಯು
ಪಾತಕನಾಶವನು ಗೈವುದಲ್ಲದೆತಾಮೇಣ್
ಘಾತವಮಾಡುತಮಲಗಳ
ಪಾತವಮಾಡುವವು ಮೂರವಸ್ಥೆಗಳಂಕೇಳ್ । ೧೦
ಅಂಧತನಮಂದತನಮಂ
ಚಂದದೆನಾಶವನುಗೈದು ರುದ್ರಾಕ್ಷೆಗಳುಂ
ಬಂಧುರ ಜ್ಞಾನವ ಕೊಡುವವು
ಚಂದ್ರಧರಂ ಮೆಚ್ಚಿಮೋಕ್ಷಪಾಲಿಪತೆರದಿಂ । ೧೧

## ಉತ್ಪಲಮಾಲಾವೃತ್ತ

ಅಂಗದೆರುದ್ರನಕ್ಷಿಯನು ಧಾರಣಗೈದಡೆ ಭೂತಭೀತಿಯಂ
ಪಿಂಗಿಸಿ ರೋಗದುಷ್ಟಘನತಾಪವ ವೃಶ್ಚಿಕಸರ್ಪಜ್ವಾಲೆಯಂ
ನುಂಗುವವ್ಯಾಘ್ರಗರ್ಜನೆ ಮಹಾಬಲವೈರಿಯ ಖಡ್ಗಘಾತಿಯುಂ
ಭಂಗವಗೈವುದಾಸರನ ಕೊಲ್ಲಲುಬಂದಿರಲೊಂದು ಕೇಳುನೀ । ೧೨

(ಕಂದಪದ್ಯ)

ಲಾಲಿಸು ಭೂಪನೆ ಕೇರಳ
ಪಾಲಿಪಚಾಮರಸನರಸಿ ರುದ್ರಾಕ್ಷಿಯತಾಂ
ಲೋಲದಿ ಧಾರಣಗೈವುತ
ಮೇಲಾಗಿಹ ಕಾಂತನಲ್ಲಿ ಗೈತರೆನರಪಂ । ೧೩
ಕ್ರೋಧದಿ ಕೇಳ್ದನು ರಾಣಿಗೆ
ಭೇದಿಪೆ ನಿನ್ನ ಸುಮನೇನು ಗೈದಿಹೆ ನೀಚೇ
ಮಾಧವ ಭಜಕನನು ನಾನೀ
ನಾಧನಸಖನಕ್ಷಿಧರಿಸಲೇನಿದು ಕೃತಕಂ । ೧೪

[ಮತ್ತೇಭವಿಕ್ರೀಡಿತವೃತ್ತ

ತೆಗೆರುದ್ರಾಕ್ಷಿಯನಂಗದಿಂದಲೆನುತಂ ಮೇಲ್ವಾಯ್ದು ತಾಕೊಳ್ಳುಃ
ಬಗೆಯಂ ತೋರಲು ಭೀತಿಯಿಂದೆವನಿತಾತಾ ರಟ್ಟೆಯೊಳ್ಸೇರಿಸಲ್
ದುಗುಡಂಗೊಳ್ಳುತ ರೋಷದಿಂದಲದತಾಂ ಕೇಳಲ್ಕೆ ದುರ್ಬುದ್ಧಿಯಂ
ಮಿಗೆಸಾಸಂ ಗೊಳಿಕೇಳದಾಗಲವನೀ ಶಂಶಸ್ತ್ರಮಂ ಕೊಂಡನು । ೧೫

(ಚಂಪಕಮಾಲಾವೃತ್ತ)

ಪರಡಿದಕೋಪದಿಂ ಕರದಶಸ್ತ್ರದೆ ಚುಚ್ಚುತಲಂಗಮೆಲ್ಲವಂ
ಪರಿದನು ರುದ್ರನಕ್ಷಿ ಬರಲಿಲ್ಲವು ಕೆಂಡವ ಕಾರಿಮೀಟಲುಂ
ಪರಿಯದುಚರ್ಮ ಬಾಲೆಗದರಿಂ ಘನಘಾತದ ಬಾಧೆಯಾಗದೆ
ಮೆರೆಯಲು ರಾಯನಂಜಶಿವನಾಮವ ಕೀರ್ತನೆಗೈದಕೇಳಲ್ಕೆ । ೧೬

## ವಚನ

ಆಗಲಾಚಾಮರ ಸಂಕೀರ್ತಿಸುತ ತನ್ನಯ ಮಡದಿಸಹಿತುಮಾವರ ಭಕ್ತಿಯಂಕೊಂಡು ಚಿರಕಾಲ ವಷ್ಟಾವರಣ ನಿರತನಾಗಿಯಂ ತ್ಯದೊಳ್ ಶಿವ ಪುರವಪೊಕ್ಕ ನರಸಾ ॥ ೧೭

## ಕಂದಪದ್ಯ

ಇಂತಹ ಶಂಕರಚಕ್ಷುವ
ಸಂತೋಷದೆ ಧರಿಸುತಿರ್ಪಯೋಗಿಯಮಹಿಮಾ
ನಂತವ ಪೇಳಲಿಕಪ್ಪುದೆ
ಮುಂತಿನಮಂತ್ರಾಢ್ಯತೆಯನಾನು ಪೇಳ್ವೆನು ಕೇಳ್ಕೆ ॥ ೧೮

(ಚಂಪಕಮಾಲಾವೃತ್ತ)

ಒರೆಯುವೆಲಾಲಿಸೈ ಕ್ಷಿತಿಪಮಂತ್ರಮಹತ್ತ್ರಣವಂ ಮಹೇಶಚಿ
ತ್ತುರುತರ ಚಿತ್ಪ್ರಣವಮ್ಮುದಯಮಾಯ್ತುದರಿಂ ಕಳೆಬಿಂದುನಾದಗಳ್
ದೊರಕಲು ಬಂದಿತಾಗಅಕಾರ ಉಕಾರಮಕಾರಮೆನ್ನುತ
ಬೆಳೆಯುತಓಂ ಸದಾಘರತರಪ್ರಣಮಾದುದು ಕೇಳ್ನರಾಧಿಪ । ೧೯

## ಉತ್ಪಲಮಾಲಾವೃತ್ತ

ತಾರಕದಂಡಕಂ ವಿಮಲಕುಂಡಲಮೂರ್ಧೆಯುವಾರಬಿಂದುಗಳ್
ಮಾರವಿನಾಶಮಂತ್ರವಿವು ಪಂಚಮಹಾಕ್ಷರದಿಂದಲಾದವು
ಧೀರನೆಕೇಳು ಪಂಚವರಣಂಗಳು ಪಂಚಸಜಾಳಿಯಿಂದತಾ
ತೋರಿಹುವಾಗ ಭೂತಗಣಪಂಚಕ ಪಂಚಕತತ್ವವಾದವೈ ॥ ೨೦

ಪಂಚಕತತ್ವದಿಂದ ಲವತಾರವಗೈದವು ಸರ್ವತತ್ವಗಳ್
ವಂಚನೆನೀಗಿಕೇಳು ಘನತತ್ವವ ಪೇಳಲುಶಕ್ಯವಲ್ಲವೈ
ಮಿಂಚದುತೋರಿ ನಾಶವಡೆವಂದದೊಳಿರ್ಪುದು ಭ್ರಾಂತಿಲಕ್ಷಣಂ
ಕಾಂಚನಗಾತ್ರವೇಳುವೆನು ಮಂತ್ರಮಹತ್ವವನೆಂದನಾಮುನಿ। ೨೧

## (ಕಂದಪದ್ಯ)

ಹರಮಂತ್ರವನುಡಿಯಲ್ಕಾರ
ಪರಮಾತ್ಮಂ ಮನ್ನಿಸುತ್ತೆಸಂಭ್ರಮದಿಂದಂ
ಮೆರೆಸುವಸಾಯುಜ್ಯದಪದ
ವರಗಳಕೇಳೆಂದ ವೃಷಭಯೋಗೀಶ್ವರತಾಂ । ೨೨

ಮಂತ್ರಕೆಜಾತಿಯೆತಾನಿ
ಲ್ಲಂತ್ಯಜ ತಾವೊದಲುಗೊಂಡು ಸರ್ವರುನುಡಿಯಲ್
ಗಂತುವಿನವೈರಿ ಮೆಚ್ಚುತ
ತಾಂತೋರ್ಪಂ ನಿಜದರೂಪಮಂತಿಳಿಸತ್ಯಂ । ೨೩

ನುಡಿಯಲುಬಾರದಮನುಜಂ
ನುಡಿಯನ್ನ ಸ್ಪಷ್ಟವಾಗಿ ನುಡಿದರುಮೃಡತಾಂ
ಪಡೆದಮ್ಮಮಗುವುನುಡಿಯ
ಲ್ಪಡಗರದಿಂದಪ್ಪುವಂತಿರೊಲಿಪಂ ಸಹಜಂ । ೨೪

ಮಂತ್ರದಿ ರೋಗವುವಶಕರ
ಮಂತ್ರದಿಘನ ವೈರಿನಾಶಪೊಂದುವನೀಕೇಳ್

ಮಂತ್ರದ ಪಠಣದಿ ಸುಖಮಯ
ಮಂತ್ರವಜಪಿಸಲ್ಕೆ ಭವವು ನಾಶವದಹುದು । ೨೫

(ಮತ್ತೇಭವಿಕ್ರೀಡಿತವೃತ್ತ)

ಯತಿಸಾನಂದರು ಕಾಲಕುಂಡದಲಿ ತಾಪ್ಪಾಪಾತ್ಮರನ್ನೀಕ್ಷಿಸು
ತ್ತತಿಕಾರುಣ್ಯದಿಮಂತ್ರಮಂ ಪಠಿಸುತಂ ತಜ್ಜೀವಿಗಳ್ಗಿತ್ತರೈ
ಗತಿಯಂಮೇಣ್ಮುನಿಬಾಲಕಂ ಯಮುನದರ್ಪಕ್ಷಂಜುತೀಮಂತ್ರಮಂ
ನುತಿಗೈದೀಶನ ಬಲ್ಮೆಯಿಂಗೆಲಿದನೈ ತಾಮೃತ್ಯುಮಂ ಭೂಮಿಪಾ ॥ ೨೬

ಇದುತಾಂಪೋಗಲಿ ಸ್ವೇತನೆಂಬಮರುಳಂ ಕಾಮಾಂಧನಾಗುತ್ತ ಶಾ
ಮುದದಿಂ ಸಂಗವಮಾಡಿದಂ ಶಿವನಿಯಂತೆಂಬೊರ್ವಳಂ ಭಾನುತಾ
ನುದಯಂಕಾಣದ ಮುನ್ನವೇಪರಿಯುತಿರ್ದಂಪೂಗಳಂಚೌರ್ಯದಿಂ
ದಿದಕಂತಾವೃತಿಪೊಂದಿದಂ ಮರಣಕಾಲಕ್ಕಿಂತು ಪೇಳ್ದಂಖಳಂ । ೨೭

( ಕಂದಪದ್ಯ (

ಸೂಳೆಯದಾಗಿಹ ಶಿವನಿಗೆ
ಮಾಲೆಯೊಳಿಮು ತಾನುಕೂಡಲೆನ್ನುತಲೆಸೆಯಲ್
ಭಾಳಾಕ್ಷನಾತನೆಸದಿಹ
ಮೇಲಾಗಿಹ ಕುಸುಮುವನ್ನು ಧಾರಣಗೈದಂ । ೨೮

## ವಚನ

ಇಂತಾ ಸ್ವೇತನೆಸೆದಪೂವುಂತನಗರ್ಪಿತಮಂ ಮರಣಕಾಲದೊ
ಳಿತ್ತನೆಂದುಂ ಪ್ರಾರಾಬ್ಧ ಪುಣ್ಯಪೂರಿತನಲ್ಲದೀತಂ ಪರಮಭಕ್ತಶಿಖಾಮಣಿ
ತಾನಹುದಹುದೆಂದು ದೇವಂತಾಸ್ವೇ ೀ ತ ನಂ ಸಾಯುಜ್ಯಕೊಯ್ದನರಿಯೈ
ಮಂತ್ರಮಂ ನೆರೆಭಕ್ತಿಯಿಂ ಸುತಿಸಲಾನರಗೆಗತಿಯಪ್ಪುದೇಂ ಪೊಸತೆನಲಾ
ರಾಯಂ ಮಾನಾನಂದಮಾಂತುಪಾದೋದಕದಿರವಂಪೇಳ್ವದೆಂದೆರೆಗಿದಂ ।೨೯

(ಕಂದಪದ್ಯ)

ಹರುಷದೆ ಲಾಲಿಸುಭೂವರ
ವರಪಾದೋದಕದ ಮಹಿಮೆಬಣ್ಣಿಸಲಳವೇ
ಪರಶಿವನಂಗದೆಪುಟ್ಟಿತ
ನರಸುರಪಾತಾಳ ಪೂತಗೈವದುನೋಡೈ । ೩೦

(ಉತ್ಪಲಮಾಲಾವೃತ್ತ)

ಆದೊಡೆಕೇಳು ಪಾದದುದಕಂ ನೆರೆತೋರ್ಪುದುಮೂರುರೂಪದಿಂ
ಪ್ರೌಢನುಮುಕ್ತಿದಾತಗುರು ಪಾದದೆತಾಕರುಣಾಜಲಂ ಮಹಾ
ನಾದರದಿಂಪಲಿಂಗದಜಲಂ ವಿನಯಾಜಲ ಜಂಗಮಾರ್ಯಸ
ತ್ಪಾದದೆ ಪುಟ್ಟಿತಾಸಮತೆಯೆಂಬುವ ಪಾದಜಲಂನರಾಧಿಪ । ೩೧

(ಕಂದಪದ್ಯ)

ಇಂತಹಕರುಣಾಪೂರಿತ
ಸಂತಸದುದಕದಲಿ ಪೋಪವೆಲೆಭೂವರನೇ
ಚಿಂತೆಯ ಬಿಡುಪೇಳುವೆನಾ
ನಂತಹದುಷ್ಕರ್ಮವಿವರವೆಂದಂ ಮುನಿಪಂ । ೩೨

(ಮತ್ತೇಭವಿಕ್ರೀಡಿತವೃತ್ತ)

ಗುರುಪಾದೋದಕ ಲಿಂಗಜಂಗಮದ ಸತ್ಪಾದೋದಕಂಕರ್ಮಪಂ
ನಿರುತಂ ಶುದ್ಧವಗೈದು ಸಂಚಿತದಿತಾ ಸದ್ಭಾವಮಂಪುಟ್ಟಿಸಿ
ವರಪ್ರಾರಾಬ್ಧದಿ ದೇವನಿಂಗಿತವ ತಾಂತೋರುತ್ತಲಾಗಾಮಿಯಿಂ
ಹರನೊಳ್ಕೂಡುವ ರೀತಿಗೈವುದರಸಾನೀ ಕೇಳುಪಾದೋದಕಂ । ೩೩

[ಚಂಪಕಮಾಲಾವೃತ್ತ]

ಅನಘನಮಂತ್ರಮಂ ಪಠಿಸೆತಜ್ಜಲ ಮಂತ್ರಜಲಂಪಮೋದಕಂ
ಘನತರಲಿಂಗತಿಕ್ಕಲಪು ತಾಘನಲಿಂಗಜಲಂ ಮಹಾಂಬುವುಂ
ತನುವಿಗೆ ಕಾಷ್ಟಸಾಗಲು ಪ್ರಸಾದಪದೋದಕಮಾಯ್ತು ಭೂಪಕೇ
ಳಿನಿತಿಹಮೂರು ರೂಪದಲಿ ಪೂಜ್ಯರು ಮಾಳ್ಪರುಪಾದವಾರಿಯುಂ । ೩೪

## ಮತ್ತೇಭವಿಕ್ರೀಡಿತವೃತ್ತ

ಶಿವಮಂತ್ರಾನ್ವಿತವಾರಿಯಿಂದ ಲನಿಶಂಪಾಕಾದಿಯಂಮಾಡುತಂ
ಭವಮಂನಾಶಿಪಲಿಂಗವಾರಿಯಲಿ ತನ್ನಂಗಾಂಗಮಂ ಮೀಯುತಂ
ತವಕಂ ದೋರುತಲೀಂಟುತಂ ಭಕುತಿಯಿಂತಾನಾಪ್ರಸಾದಾಂಬುವಂ
ತವೆಶಾರೀರದಿ ಪೂಸಬೇಕುತಿಳಿನೀ ನಿಂತಿರ್ಪಸದ್ವೇದಮಂ । ೩೫

## ಕಂದಪದ್ಯ

ನೀರಿಂದೆಲ್ಲವುಶುದ್ಧಂ
ನೀರದುಗುರು ಪಾದಸೋಂಕಲಪ್ಪುದುಶುದ್ಧಂ
ಧೀರಗುರುಪಾದತಾನೇ
ಯಾರಿಂದಲು ಶುದ್ಧವಿರದೆಸ್ವಯಕಂ ಶುದ್ಧಂ । ೩೬

ಊರಿನೊಳಗಿರ್ಪನೀರದು
ಕೇರಿಯೊಳಂ ಪರಿದುಪರಿದು ಪಳ್ಳವಕೂಡಲ್
ಸಾರತರ ಶಿವನ ಪೂಜೆಗೆ
ತಾರದೆಬಿಡುತಿಹರೆ ಮಲಿನಜಲತಾನೆಂದು । ೩೭

ಕುರುಡನಿಗೆ ಕಣ್ಣುಬರುತಿರೆ
ಪರಮಾನಂದವಲಿ ಪರಿದು ಪಾರುವತೆರದಿಂ
ವರಭಕ್ತತಾನುಗುರುವಿನ
ಸುರುಚಿರಪದ ಜಲವಕಾಣಲವ ತೋಷಿಪನೈ । ೩೮

ಧರೆಯೊಳ್ಪರಿಯುವನದಿಗಳ್
ಗುರುಪದಸಜ್ಜಲಕೆ ಸರಿಯದಪ್ಪುದೆ ನೃಪಕೇಳ್
ಪರಿಭವ ಕಳೆಯುವವೆನುತಲಿ
ಭರದೊಳ್ ಪೋಗುತ್ತಮುಳುಗಿ ಬರ್ಪರ್ರನರರು । ೩೯

ನೀರ್ಗಳೆವುದು ಮೇಲಿನಮಲ
ಕಾರ್ಗಾಲದೊಳಿರ್ಪಪಾಪಮಂ ತೊಲಗಿಪುದೇ

ಮಾರ್ಗವತೋರ್ಪುದು ಗುರುಜಲ
ಕೂರ್ಗಣೆಬಿಟ್ಟಂತೆಯೊಡಲನಿರ್ಬಗೆಗೈಸಿ । ೪೦

## ವಚನ

ಇಂತಪ್ಪವಾದೋದಕಮಂ ನಂಬಿಬಹುಜನರ್ತಮ್ಮಕಾಯಮ ಪುನೀತಗೈದರದರೊಳೊಂದು ಚರಿತೆಯಂ ಪೇಳ್ವೆನೆಂದಂ ಮುನಿಪಂ । ೪೧

## (ಕಂದಪದ್ಯ)

ಕನಕಾದ್ರಿಯಲ್ಲಿನಿಶ್ಚಲ
ಮನದಿಂಧ್ಯಾನಿಸುತಮುದದಲಷ್ಟಾವರಣಂ
ಘನಘಂಟೆಯ ನುಡಿಸುತಪರ
ಸ್ವನಕೇಳದಲೀಶಧ್ಯಾನದಿರ್ದಂ ಮುನಿಪಂ । ೪೨
ಉಂಟಾತನನಾಮವುಸ
ದ್ಘಂಟಾಕರ್ಣಂ ಸುವೀರನೆಂಬುವದವತಾ ॥
ನೆಂಟಡಿವರಿಜನಸಿತನಿಗೆ
ಟೆಂಟಣಿಸುವ ಪುಷ್ಪವಾಟಿಕಾಯುತಲಿರ್ದಂ । ೪೩

## (ಮತ್ತೇಭವಿಕ್ರೀಡಿತವೃತ್ತ)

ಇರೆತಾತೋಟವ ನೋಡಲೊಂದು ದಿನದೊಳ್ಬಾಡುತ್ತುಪೂವೊಂದುಕೇಳ್ಕರಣಂ ತಾಘನಕೋಪವಾಂತು ಮನದೊಳ್ದೀವೇಶಗಂಸಲ್ಲದೀ
ಮರದೊಳ್ಬಾಡಿತು ಪುಷ್ಪವೇನುಗತಿಯ್ಯೆ ಮಾರ್ತಾಂಡನಿನ್ನುಷ್ಣದಾ
ಕಿರಣಂ ಬೀರುತಲಿಂತುಗೈದೆಪಡಿಯ್ಯೆನೀಕುಷ್ಟವನ್ನೆಂದನು । ೪೪
ಯತಿತಾಂ ಶಾಪವನೀಡಲಾಗಿರವಿತಾ ಹೃದ್ಭೀತಿಯಂತಾಳುತಂ
ಮತಿಗೆಟ್ಟಂ ಘನಕುಷ್ಟವೊಂದಿವರಕಾಸೀ ಕ್ಷೇತ್ರದೊಳ್ಪೊಕ್ಕುವಾ
ಕ್ಪತಿನಾರಾಯಣಿ ವಂದಿತಾದ್ವಯನು ಮೇಣ್ಬಾಲಾರ್ಕತಾನೆನ್ನುವ
ಪ್ರತಿಮಂ ಪೊಂದಿಹದೇವನನ್ನು ನುತಿಸಲ್ತಾನಾಗವ್ಯೆದೋರಿದಂ । ೪೫

## ವಚನ

ಆಗಳಾಪಂಕಜಾಪ್ತಂ ತನ್ನಂಗಕುಷ್ಟವುಂ ಪರಿಹರಿಸೆಂದು ಬೇಡಲ್ಗಿರಿಜಾಧವಂ ಮನದೊಳಾಲೋಚಿಸಿ ಹೆರಶರಣರಶಾಪ ಮೆನ್ನಿಂದಳಿಯದರಿಂ ಶರಣಶಾಪಮಂ ಶರಣರಪಾದೋದಕದಿಂ ಶಾಂತಗೈವುದೆಂದಿಹುದು ತತ್ಕಾರಣಂ ನೀಧರೆಯೊಳ್ಪುನೀತರಾಪ ಮನುಹರಗಣೇಶ್ವರರ ಪಾದೋದಕದಿಂ ನಿರ್ಮಲನಾಗೆಂದು ಸುರಿವೈಗರೆಯುಲ್ । ೪೬

(ಕಂದಪದ್ಯ)

ಬಹುಕಾಲಂ ಮನುಹರಗಣ
ಮಹನೀಯನ ನೇವೆಗೈಯುತಾಗುರುಪದದಿಂ
ಬಹಪಾದೋದಕಬಲದಿಂ
ದಿಹಕುಷ್ಟಮುಕಳಿದುಕೊಂಡರವಿ ಕೇಳರಸಾ । ೪೭
ಕೇಳಲಿ ರಾಮನೆಗುರುವಿನ
ಮೂಲೋಕದ ಪುಣ್ಯಮಪ್ಪ ಪಾದೋದಕಮಂ
ಪೇಳಲು ತಾನಸದಳಮದು
ಭಾಳಾಕ್ಷನೆ ಬಲ್ಲನೆಂದಯತಿವರದೇವಂ । ೪೮

ಈಪ್ರಕಾರದಿಂ ವೃಷಭಯೋಗಿಮುರು ಹೆಪರಮಾನಂದದಿಂ ಪ್ರೈಯಿಕ್ಕಿಪ್ರಸಾದ ಮಹಿಮೆಯನ್ನೊರೆಯೆಂದು ನುತಿಸಲಾ.ನೃಪಗೆಯತಿಪಂ ಪೇಳ್ದಂ । ೪೯

### ಮತ್ತೇಭವಿಕ್ರೀಡಿತವೃತ್ತ

ಕ್ಷಿತಿಪಾಲಾಲಿಸುಸುಪ್ರಸಾದದಿರಮಂ ಶುದ್ಧಂಪದಾಸಿದ್ಧಮೇ
ಣತಿತೇಜೋಮಯ ಸುಪ್ರಸಿದ್ಧವೆಸುತಂತಾತ್ತೂರ್ಪೃಷ್ಟೆ ನೋಡಲು
ಮತಿಗೆಟ್ಟಾವನಸರಂ ಪ್ರಸಾದವನು ತಾಕೈಕೊಳ್ಳದಿದೂರ್ಕ್ಷಣಂ
ಪತನಂ ದಾಳ್ವನು ಸತ್ಯಮೆಂದು ನುಡಿದಂ ತಾನಾ ಮಹಾಯೋಗಿಪಂ । ೫೦

(ಉತ್ಪಲಮಾಲಾವೃತ್ತ)

ಶುದ್ಧಪ್ರಸಾದವೇ ಗುರುಸುವೀರನ ಶೇಷವು ಲಿಂಗಕರ್ಪಿತಂ
ಸಿದ್ಧಪ್ರಸಾದ ಜಂಗಮನಶೇಷವು ತಾನದುಸುಪ್ರಸಿದ್ಧವೈ
ಮುದ್ದುಮುಖಾವನೀಶತಿಳಿಯೆನ್ನಲುತಾಮನದಿಂ ಮುದಂಗೊಳು
ತ್ತಿದ್ದ ಮುನೀಶ ಪಾದಪಿಡಿದಾವರಣಂಗಳ ಪೇಳ್ವದೆಂದನು । ೫೧

ವಚನ

ಎನಲಾಮುನಿ ಪಾಳಪೇಳ್ದಂ । ೫೨

ಕಂದಪದ್ಯ

ಹರಗುರುಜಂಗಮಶೇಷಂ
ಪರಿಭವಸಾಶವನು ಗೈವಪರಮಾಮೃತವೈ
ಧರಣೀಶನೆ ಲಾಲಸುಸೀ
ನ್ನುರುತರದ ಪ್ರಸಾದಮಹಿಮೆ ಪೇಳುವೆನೈನಾಂ । ೫೩

ಆರಾರಿಂದಲಿ ಪೋಗದ
ಘೋರತರಂ ರುಜೆಯುಶೇಷವಿಕ್ಕಲ್ತಾನುಂ
ಪರಿಹರಿಪುದು ಗುರುಕರುಣದಿ
ಬರೆದಿರ್ದಾಯುವನು ತಿದ್ದಿತೋರ್ಪುದಃಜನಕೆ । ೫೪

ವಿಷಜಂತುಕಚ್ಚೆನರನಿಗೆ
ವಿಷಕಂಠನಭಜಸಿ ಶೇಷಸೇವಿಸೆಕೊಡಲಾ
ವಿಷಮೆಲ್ಲಪೋಗಿತನುಕ
ಲ್ಮಷಪಡಗುತಮನದಿ ಭಕ್ತಿತೋರ್ಪುದುನಿಜದಿಂ । ೫೫

ಪೇಳಲಿಕಾಗದುರಸನೆಗೆ
ಭಾಳಾಕ್ಷನ ಭಕ್ತವರ ಪ್ರಸಾದದದರ್ಪಂ
ಮೇಳೈಸವು ಸರ್ವಮುತಾ
ನಾಲೋಚನೆ ಯಿಲ್ಲವಿದಕೆ ಕೇಳುವದರಸಾ । ೫೬

## ವಚನ

ಎಂತೆಂಬಮುನಿವಗೌಳಿಯ ಪದಾಬ್ಜಕೆರಗಿಯ ನಿಮಿಷೇಂದ್ರಂ
ವಿನಯದಿಂದೆಂದಂ । ೫೭

## ಕಂದಪದ್ಯ

ಎಲೆದೇವನೀನೆಗುರುವೈ
ನೆಲೆತಾನರಿಯಲ್ಕೆಬಾರದಿವರಿಂದಂತಾಂ
ಸಲೆಭಕ್ತರಾರುಮುನ್ನಂ
ಮಲಹರನೊಳ್ಬೆರೆತರವರ ಮಹಿಮೆಯಪೇಳ್ಕೈ । ೫೮

## ಚಂಪಕಮಾಲಾವೃತ್ತ

ಧರುಣಿಪಮುನ್ನನೊರ್ವಸುಯಿಧಾರಿಯ ನಾಮದಭೂಪಕೇರಳಾ
ಪುರವನುಪಾಲಿಸುತ್ತಲಿರೆ ಬೇಟೆಯಕಾಲದಲೊರ್ವ್ರಕೆತ್ತಲಾ
ಗಿರುತಿರಲೊಂದು ಪಳ್ಳಿಯಲಿವಾಸವಮಾಡಲು ಭಕ್ತನೊರ್ವತಾ
ಪುರಹರಶೇಷಕೊಳ್ಳಲಿಕೆ ಭೂತಿಯನಿತ್ತನು ಕೇಳುಭೂಮಿಪಾ । ೫೯

## [ಮತ್ತೇಭವಿಕ್ರೀಡಿತವೃತ್ತ

ಕೊಡಲಾಭೂತಿಯರಾಜಕಂಡು ಕುಲಮೇನಾಚಾರ ಮೇನೆಂದುತಾ
ನೊಡನಾಭಕ್ತನ ಕೇಳಲಾಗಿಯವ ಭೂಪಂಗಂತ್ಯಜಂ ತಾನೆನಲ್
ನುಡಿಕೇಳುತ್ತಲಿ ಬಾರೆನೆಂದು ನುಡಿಯಲ್ಭೂಮೀಶನಂ ಕೋಪದಿಂ
ನೃಡಭಕ್ತಂ ಶುನಿಯಾಗಲೆಂದುಶಪಿಸುತ್ತಂ ಪೋದಕೇಳ್ಭೂಮಿಪಾ

## ಉತ್ಪಲಮಾಲಾವೃತ್ತ]

ಶಾಪವತಾಳ್ದು ರಾಜಘನಶೋಕದಿತದ್ಗುರುವಾಮುನೀಶನೊ
ಳ್ತಾಪರಿತಾಪದಿಂದುಸುರಲಾಮುನಿಭಕ್ತರ ಶೇಷಬಿಟ್ಟದು
ಷ್ಟಾಪಿಗೆ ಮುಕ್ತಿಮಿಲ್ಲಮೆನೆ ದ್ವಾದಶವರ್ಷದಿ ಶ್ವಾನಜನ್ಮದಿಂ
ದಾಪರಮೇಶಭಕ್ತರಿರುತಿರ್ಪಗ್ರಹಾಂಗಣ ಕಾಯುತಿರ್ದನು । ೬೧

(ಕಂದಪದ್ಯ)

ಬಹುಕಾಲಂ ನೃಪಶಾಪವ
ಸಹಿಸುತ್ತಿರುತಿರಲು ತಾನು ಕಾಣದುಶೇಷಂ
ಬಹುಪಾಪಿನಾನುಭಕ್ತರೊ
ಳಿಹತೇಜವ ಕಾಣದಾದೆನೆಂದಂರಾಜಂ । ೬೨

ಒಂದುದಿನಪಿಪೀಲಿಕತಾ
ನಂದಿಧ್ವಜಧ್ಯಾನದಿಂದ ಸೌಖ್ಯದೊಳಿರ್ಪಾ
ಬಂಧುರ ಭಕ್ತರಗ್ರಹಸ
ದ್ಬಾಂಡದೊಳಿರ್ದನ್ನದಗುಳು ತಂದುದುಕೇಳ್ವೈ । ೬೩

## ವಚನ

ಆಗಳಾಶುನಕಂ ಪಿಪೀಲಿಕಪಿಡಿದನ್ನದಗುಳಹಪ್ರಸಾದನುಂ ಭಕ್ಷಿಸಿಮು
ನ್ನಿನಂದದಿನರಜನ್ಮವಾಂತುದರನಾ । ೬೪

(ಕಂದಪದ್ಯ)

ಇಂತಷ್ಟಾವರಣಂಗಳುಂ
ಕಂತುವಿನಾರಾತಿ ಮೋದವದರಿಂದಾನುಂ
ಸಂತಸದೆ ತಾಳ್ದಿದೇಹದೊ
ಳಿಂತಿಹ ಪ್ರಜ್ವಲಿಪ ತೇಜಮಾಂತುದು ನೋಡ್ವೈ । ೬೫

ಎನಲಾನರಪಾಲಂತಾ
ವಿನಯತ್ವವತಳೆದು ಬಿದ್ದನಾಕ್ಷಣಮುದದಿಂ
ಮುನಿಪಾದದೆ ಪೇಳ್ದಂಸ
ಜ್ಜನಪಾಲನೆ ಮಂತ್ರಭೋಧೆಯೆನಗಿರಿಸೆಂದು ।
ಎಲೆಮಗನೆ ಕೃಷಿಕತನ್ನಯ
ಹೊಲಮಂ ಹದನೋಡಿಬಿತ್ತುವಂದದೆನಿನ್ನಾ

ನೆಲೆಯಂ ಕಂಡೆನುಹಿಡಿತಾ
ಫಲಸಸಿಮೂಡುವದು ಭೋದಿಕೊಡುವೆಂನಿನಗಂ । ೬೭
ಹೊಲಮನೆವನ ಕರುಧನಮಂ
ಗಳಿಸಲು ತಾನ್ನಿನಗೆ ಮೋಕ್ಷಕೊಡುವವೆಬಾಲಾ
ತಿಳಿಗುರುಮಂತ್ರವ ಮನದೊಳ್
ಫಳಿಲನೆತಾನಾಶ ಮವ್ಪುವಪುಭವಬೀಜಂ । ೬೮
ಬರುವಾಗಳೇನುತಂದಿಹೆ
ಪರಲೋಕಕ್ಕೈದುವಾಗ ಜೇನನ್ನೊಯ್ವೈ
ಬರಿಪಾಪಪುಣ್ಯವೆರಡೇ
ಬರುವವು ನೀತಿಳಿದುನೋಡು ಮಾನವನಿಗೆತಾ । ೬೯
ಗಾಳಿಯೊಳಗಟ್ಟ ದೀಪದ
ಬಾಳಿಕೆಪೊಲ್ನಿನ್ನತನುವ ದಸ್ಥಿರಮುಹುದೈ
ಕಾಲವನು ಕಳೆಯುದನುದಿನ
ಕಾಲಾರಿಯುನಂಬಿಭಜಸು ಸುಖಿಯಾಗುವಿನೀಂ । ೭೦
ವಾರಿಯುತಗ್ಗಿಗೆ ಪರಿವುದು
ಧಾರುಣಿಯೊಳ್ಬೇಗ ಪುಣ್ಯದಾಸರಮಿಹುಸ್ಸೈ
ಮೂರಾರಿಭಕ್ತರೆಸೆವರು
ಸಾರಾಸಾರವನು ತಿಳಿಯೆಪುಣ್ಯದರೂಪಿಂ । ೭೧
ಸಿಂಗಡಿಯಿಂ ದೀಸುವನವ
ಹಂಗಿಲ್ಲದೆ ಪೋಗುವಂತೆ ಶಿವಭಕ್ತಿಯನೀಂ
ಪಿಂಗದೆ ಪಿಡಿದರೆಭವದಾ
ಹಂಗೇಂ ನಿನಗಿಲ್ಲಕೇಳ್ವದೆಲೆ ಭೂಪಾಲಾ । ೭೨
ಆಗಸಂ ವಸ್ತ್ರದಮಾಲಿನವ
ಸೊಗಸಿಂ ಕಳೆಯುವನುವಸ್ತ್ರ ಪರಿದಿಡುವವನೇ

ನಘಹರಮಂತ್ರವುನಿನ್ನೀ
ನೊಗಡಂಕಳೆಯುವದು ಮತ್ತೆಭವಕಟ್ಟುವದೇ । ೭೩
ಅಂಧಕತಾಕಣ್ಣಿಂ ಬಲು
ಚೆಂದದಿತೆರದಿರ್ದರೇನು ಮುಚ್ಚಿದರೇನೈ
ಒಂದನುಕಾಣದ ವ್ರೋಲ್ನಿಜ
ಮುಂದೊರಕಿಸದಲೆನಿತು ಪರಿಸಿದರೇನೈ । ೭೪
ಉಂಡನ್ನವ್ಯೈಗೆ ಹತ್ತಲು
ದುಂಡಾಗಿಯೆ ತೋರ್ಪನವನು ತಾನದಪಚನಂ
ಕಂಡಾಗಲೇನು ಸುಖಮಿದ
ನುಂಡಪ್ಪೆಂಬಂತೆ ಯನುಭವಾಮೃತವಿಹುದೈ । ೭೫
ಕಣ್ಣಿನ್ನು ಮುಚ್ಚಿಕೊಂಡೇ
ತನ್ನಂತಾ ನೋಡಿದಾತಪವರ್ಣದೊಳಗಂ
ಉನ್ನತಜ್ಞಾನಮದಿಲ್ಲದೆ
ಯಿನ್ನುಂ ಫಲವೇನು ವಿಷಯಸಂಗ್ರಹದಲ್ಲಿ ॥ ೭೬
ಭೂಪಂ ಮುನಿದರೆಪ್ರಜೆಗಳ
ಲೋಪಂತಾನಪ್ಪತೆರದೆ ನಿನಗಾಶಿವಸ
ದ್ರೂಪಂ ಮುನಿದರೆಬಹುದತಿ
ಪಾಪಂ ತಿಳಿನಂಬುಶಿವನ ಪಾದಾಬ್ಜವನು । ೭೭
ಪ್ರಾಣದಕಿಂತಲು ಧರ್ಮವು
ತಾನದು ಮೇಲೆಂದುರಕ್ಷಿಸೈ ಧರ್ಮವನೀಂ
ಪ್ರಾಣವು ಪ್ರತಿಜನ್ಮದೊಳಂ
ಮಾಣದೆ ದೊರೆಯುವದು ಧರ್ಮದೊರೆಯದುಸತ್ಯಂ ೭೮
ಚರಸೇವೆಯು ಕರಭೂಷಣ
ಹರದರ್ಶನ ನಿನ್ನನಯನಕತಿಭೂಷಣವೈ

ವರಭೂಷಣಶಿವಿಗಳಿಗುಂ
ಶರಣರ ಸತ್ಕಥೆಯ ಕೇಳ್ವದೆಲೆಚನ್ನಿಗನೇ । ೭೩

ಲಿಂಗವೆಚಿದ್ರೂಪಂ ನರ
ನಂಗವೆ ಜಡಚೇತನಾತ್ಮನೆನಿಸುವಜೀವಂ
ಪಿಂಗದೆ ಲಿಂಗಸುಸಂಗದೊ
ಳಿಂಗಿತವರಿದಿಹನು ಯೋಗಿಲಿಂಗಾಂಗದಲಿ । ೮೦

ಅದರಿಂದಲಿನ್ನು ತಿಳಿನೀಂ
ಮುದದಿಂ ಲಿಂಗವನು ಕಾಣದಶನವಜಲವಂ
ವದನದೊಳಿಕ್ಕಲು ಬೇಡೈ
ಮದನಾರಿಯು ತೋಷಮುಪ್ಪನಿದುತಾಸತ್ಯಂ । ೮೧

## ವಚನ

ಇಂತೆಂದು ಮುನಿಪಾಲಂ ಲಿಂಗದರ್ಶನವಿಲ್ಲದನ್ನಪಾನಂಗಳಂ ಕೊಳ್ಳ
ಬೇಡೆಂದು ಕಟ್ಟಾಜ್ಞೆಯಂ ಮಾಡಿದೀಕ್ಷೆಯನುಕೊಡಲ್ । ೮೨

## ಕಂದಪದ್ಯ

ಲಾಲಿಸು ರಾಮನೆರಾಜಂ
ಲೋಲದೆ ಮುನಿಪಾಲನಿತ್ತ ಬೋಧೆಯಕೊಂಡುಂ
ಪಾಲಿಸುವೆಂ ಗುರುವರನೀ
ಪಾಲಿಸಿದಾಜ್ಞೆಯನುಶಿರದೆ ತಾಳುತಲೆಂದಂ । ೮೩

ಭೋಧೆಯಕೊಟ್ಟಂ ಗುರುವರ
ಸಾಧಿಸಿತನಿಮಿಷನಿಗಂದಿನಿಂ ಭಕ್ತಿಯುತಾ
ಪೋದಂ ವೃಷಭಮುನೀಂದ್ರಂ
ಮೋದದೆಮಣಿಯುತ್ತ ಶಿವಪದಾಬ್ಜವನೆನಿಸಿ । ೮೪

ಇದು ಶ್ರೀಮದ್ವೀರ ಶೈವಾಚಾರಧು ರೀಣಶಾಂತವೀರದೇವರೊಡಲಬ್ಧಿ
ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವಜನ್ಮ ಮಹಾಕಾವ್ಯ
ದೊಳ್ನವಮಾಶ್ವಾಸಂ ಸಮಾಪ್ತಂ ಅಂತು ಸಂಧಿ ಒಂಭತ್ತಕ್ಕಂಗದ್ಯಸದ್ಯಂಗ
ಳೇಳುನೂರಾಮೂವತ್ತೆಂಟಕ್ಕಂ ಮ ಂ ಗ ಲ ಮ ಹಾ

# 卐 ದಶಮಾಶ್ವಾಸ ಪ್ರಾರಂಭ 卐

## (ಚಂಪಕಮಾಲಾವೃತ್ತ)

ಮಗನನುಕೊಂದೆ ಮಾವನನು ಭಂಗಿಸಿದ್ವೈರತಿಗೊಟ್ಟನಾರಿಯಂ
ಜಗವರಿಯಲ್ಕೆ ಪ್ರಾಣವನುಬೀರಿದೆ ಭಕ್ತರಬಾಲರಂಗಮಂ
ಬಗೆಯುದೆತಿಂದೆ ಲೋಕಬೆಳಿಪಂಗಜನಂಗವಸುಟ್ಟೆ ಕೋಪದಿಂ
ಜಗದೊಳುನೇರ್ವರಾರು ನಿನಗಾಗಿರಿವಾಸವು ಮಾನ್ಯಶಂಕರಾ । ೧

ಕುವರನಕೊಂದೆ ಸುಂದರಸತೀಜನಕಂ ಗತಿಭಂಗವಿತ್ತೆಸಂ
ಗವನಿಡಿದಾಕೆಯಂ ಬೆರಿಸಿದೈಘನಲಿಂಗದೆ ಬಾಲಭಕ್ತರ
ನ್ನವನಿಗೆ ಬಾರದಂತಸುವನುಂಗಿದೆ ಮಾರನಬಾಧೆಮಾಣ್ಸಿದೈ
ಭವದೊಳು ಸೇರರಾರು ನಿನಗಾಗಿರಿವಾಸವು ಮಾನ್ಯಶಂಕರಾ । ೨

## (ಕಂದಪದ್ಯ)

ಯತಿವರ ಪೇಳಿದ ತೆರದೊಳ್
ಸತತಂ ಲಿಂಗವನು ಕಾಣದಶನಜಲಂಗಳ್
ಮತಿಯುತಮಾನ್ಯಂ ರಾಜಂ
ಮತವಿಡಿದಂ ಕೊಳ್ಳದಂತೆ ಯಲೆಸಿದ್ಧೇಶ । ೩

## ಮತ್ತೇಭವಿಕ್ರೀಡಿತವೃತ್ತ

ಭರದಿಂ ರಾಜನು ತನ್ನರಾಜ್ಯದಲಿ ತಾ ಕಟ್ಟಾಜ್ಞೆಯಂಬೀರಿದಂ
ಗಿರಿಜಾವಲ್ಲಭ ನಾಮಕೀರ್ತನ ಮಹಾದೇವಾರ್ಚನಾ ಸಂಭ್ರಮಂ
ನಿರುತಂ ತೋರಲಿಸರ್ವಗಲ್ಲಿಯೆನುತಂ ನಾನಾನುತಿರ್ಪಂಸದಾ
ಹರಲಿಂಗಂಗಳಕಾಣದನ್ನ ಜಲಮಂ ತಾಕೊಳ್ಳದಾ ಚಾರಮಂ ॥ ೪

(ಚಂಪಕಮಾಲಾವೃತ್ತ)

ನಡೆಸಿದರಾಗ ಸತ್ಪ್ರಜೆಗಳೆಲ್ಲರು ತಮ್ಮ ಗೃಹಂಗಳೊಳ್ಸುಖಂ
ಬಡುತಲಿ ಶಂಕರಸ್ಮರಣೆಭಸ್ಮದಲೇಪನ ಕಂಠಮಾಲೆಯಂ
ಸಡಗರದಿಂದ ಜಂಗಮನ ಪೂಜೆಸದೋದಕದಿಂ ಪ್ರಸಾದದಿಂ
ವಡಿಗಡಿಗಪ್ಪ ತತ್ವನನು ಮೀರದೆಬಾಳ್ವರು ಕೇಳುರಾಮನೇ । ೫
ತೊರಜರೆ ಸತ್ಯವಾಣಿಯನು ದೂರಿಸಿದರ್ಘನ ಮುತ್ತುರತ್ನಮಂ
ಕರೆದರು ಭಕ್ತಿಯಿಂದಮರಕಾಂತೆಯ ಮೀರ್ದರು ದೇವಸಂಘಮಂ
ಜರೆದರು ವೀರಸಂಚಯದೆ ತಮ್ಮಯದೇಹದೊಳಿರ್ಪಮೋಹಮಂ
ಮರೆದರುನಿತ್ಯವಲ್ಲದ ಶರೀರವಿದೆಂಬುದ ನೋಡಿಸರ್ವರು । ೬

[ಮತ್ತೇಭವಿಕ್ರೀಡಿತವೃತ್ತ

ಶಶಿಯೋಲ್ ಶಾಂತಿಯ ತಾಳ್ದುವೀರತನದೊಳ್ಕಂಜಾಕ್ಷನೆಂದೆನ್ನಿಸಿ
ಬಿಸಜಂ ತಾನೆನೆ ನೇತ್ರಪುಷ್ಪಸತಿಯಂ ತಾಮೋದದಿಂಕೂಡುತಂ
ದಶದಿಗ್ದೇಶದ ಭೂಪರೊಳ್ಗಹನದಿಂ ಸೌಭಾಗ್ಯದಿಂ ಶೋಭೆಯಿಂ
ಬಿಸಜಾಕ್ಷ ಪ್ರಿಯನಿತ್ತಶಾಪಮರೆದುಂ ರಾಜತ್ವದೊಳ್ಬಾಳ್ದನು । ೭

(ಕಂದಪದ್ಯ)

ಈಪರಿಯಿಂದ ನಿಮಿಷನ
ದ್ವೀಪಂ ಧರೆಪಾಲಿಸುತ್ತ ಶೋಭೆಯೊಳಿರೆತಾಂ
ಕಾಪಿನ ಕಾನನದಚರಂ
ತಾಪೊಡಮಟ್ಟನಿತು ಪೇಳ್ದನಡಿದಾವರೆಗಂ । ೮
ದೇವನೆ ನಿಮ್ಮಯಪಾದಕೆ
ನಾವನದೊಳಗಿರ್ಪ ಮೃಗದಕತ್ತುರಿಪುನುಗಂ
ಪಾವಿನಶಿರದಾನೆಯಶಿರ
ದಾವಿಕಸಿತರತ್ನ ಮುತ್ತುಕಾಣಿಕೆಯೀವೆಂ । ೯

॥ವ॥ ಇಂತುಬಿನ್ನಪಮಂಗೈವವನಪಾಲನನ್ನೋಡಿಯನಿಮಿಷನರೇಂದ್ರ

ನಕುಲ ಹರ್ಷಿತನಾಗುತಲಿ ಕಾನನಪಾಲನೀ ನಾತುರದೆ ಬರಲೇಂ ಕಾರಣವ
ದೆಂದು ಕೇಳಲಪನಿಂತೆಂದಂ । ೧೦

## ಮತ್ತೇಭವಿಕ್ರೀಡಿತವೃತ್ತ

ವನದೊಳ್ಪುಷ್ಟಮೃಗಂಗಳಾರ್ಭಟವು ತಾನಾಕಾಶಮಂ ಮೀರಿತೈ
ಜನಪಾಲಾತ್ವರದಿಂದ ಕೇಳುವದುನೀ ನಾನೆಂತುತಾಳಿರ್ಪೆನ್ನೈ
ಘನದಾಳಿಂಬಸುಜಂಬು ಪೇಣ್ಬನಸುಚೂತಂ ನಾರಿಕೇಳಂಗಳಂ
ಮನಬಂದಂದದೆ ಪಾಳುಗೈವವದರಿಂ ನೀಬಂದುಮಾಣ್ಚೆಂದನು । ೧೧

ನುಡಿಯಂ ಕೇಳುತ ಕೋಪತಾಳಿ ಕರೆದಂ ಕಾಲ್ಮೇಘಮಂಬೀರುತಂ
ಪಿಡಿಲಂ ಪೋಲುವಲುಬ್ಧ ಸಂಚಯವತಾನೇರುತ್ತಲೊಂದಶ್ವಮಂ
ನಡೆಗೊಂಡಂ ಮೃಗಯಾವಿಹಾರಮನದಿಂ ಸರ್ವಾಸ್ತ್ರಸಂಪೂರದಿಂ
ಪೊಡವೀಶಂಬಹುಬೇಗತಾ ಜವನಪೋಲಾಕಾನನಮಂ ಪೊಕ್ಕನು । ೧೨

## [ಚಂಪಕಮಾಲಾವೃತ್ತ]

ತಲೆಜಡೆಗಟ್ಟ ಮೀನೆನಸುಗೆಂಪಿರೆ ಕಂಗಳುತಾವುಪಚ್ಚೆದಾ
ಕಲೆಯನುಕೂಡಿ ಕಾರೊಡಲು ಜೋಲ್ದುಟಿಕುರ್ಗಿದಬೆನ್ನುಶೋಭೆಯಿಂ
ಬಲೆಯನು ಪೊತ್ತುಕುಕ್ಕುರವು ನಾಳ್ವಗಳಂ ನೆರೆತಾಳ್ದುದರ್ಪದಿಂ
ಮಲೆತಿಹ ಬೇಡಸೈನ್ಯಪೂರಮುಟ್ಟಿತು ಬೇಟೆಯನಾಡ್ವಕೊಬ್ಬಿನಿಂ । ೧೩

ವನಗಜಮೌಕ್ತಿಕಂತಳೆದು ಮಾವಿನತೋರಣನುಟ್ಟುತಾಮ್ರಪೂ
ವಿನಘನಮಾಲೆಯಂ ಧರಿಸಿರನ್ನದ ಭೂಷಣತಾಳಿಗಂಧಮಂ
ತನುವಿಗೆ ಪೂಸಿಮಾಣಿಕದ ತೇಜದೆ ಕೂಡಿಹಕರ್ಣದೋಲೆಯಂ
ಘನತೆಯೊಳಾಂತು ಬರ್ಪಶಬರಾಂಗನೆಯರ್ಬಳಿಸಾರ್ದರಾಗಳೇ । ೧೪

॥ವ॥ ಆಗಳಾಶಬರಪಡೆನಿಬಿಡಮಾಂತು ವನದೊಳ್ಬರುತಿರ್ಪಾಗಳ್

## ಕಂದಪದ್ಯ

ಕಾಲನರೂಪದ ಶಬರರ
ನೋಲ್ಕೆಸುತಬರ್ಪನಾರಿಯರ ತನುರುಚಿಯಂ

ಆಲೋಕಿಸಿ ಮೃಗಕುಲತಾ
ನಾಲೊಚನೆಗೈದುದವನು ನಾನೇಂ ಪೇಳ್ವೆಂ । ೧೫

(ಮತ್ತೇಭವಿಕ್ರೀಡಿತವೃತ್ತ)

ಘನದಾವಾಗ್ನಿಯತೇಜ ಪರ್ಬಿಬಹುದೋ ಪೂರ್ವಾದ್ರಿಯೊಳ್ಮೂಡುತಂ
ದಿನನಾಥಂ ತಮವಟ್ಟಿ ಬಂದನೊ ಸುರರ್ತಾವ್ಕೂಡಿಕೊಂಡೆಮ್ಮಜೀ
ವನಮಂ ನಾಶವಮಾಳ್ಪೆನೆಂದುಜವನಂ ಮುಂದಿಕ್ಕುತೈತಂದರೋ
ತನುತಾಂ ನಾಶಮುದಪ್ಪುದಿಲ್ಲಿನಿಲಲೆಂದೆಲ್ಲಾಮೃಗಂ ಪೋದವು । ೧೬

ಕರದಿರ್ಪಾಯುಧಪಾಶ ಭಲ್ಲೆಬಲೆಯಂ ತಾಕೂಡಿಕಾಲಾಳ್ಗಳಂ
ಭರದಿಂ ಪೋಲ್ವಕಿರಾತ ಸೈನ್ಯವನು ತಾಕೂಡುತ್ತಲೊರ್ವಂಮಹಾ
ಶಿರದಿಂದೆಚ್ಚನು ಪಂದಿಯೊಂದನದನಂ ಮೇಲ್ವಾಯ್ದು ತಾಬರ್ಪ ಸೂ
ಕರನಂಶ್ವಾನಮುದೊಂದು ಕಚ್ಚಿಕೆಡಹಲ್ಕೊಂಡಾಡಿದಂ ಲುಬ್ಧಕಂ । ೧೭

ಇದುನೋಡಿಕ್ಕೆಲಿ ಖಡ್ಗದಿಂದಗಜಮಂಚಿತ್ರಾಂಗಮೇಲ್ವಾಯ್ದುವೈ
ವಧಿಸೈಶೂರನೆ ಕಾಡಕೋಣವಿದುಸುಕ್ಷಂ ರೋಷಗೊಂಡಿರ್ಪುದಂ
ಮುದದಿಂಕೊಲ್ಲೆಲೆ ವೀರನೀನು ಕೆಡಹೈಮೇಲಾದ ಭೇರುಂಡನಂ
ಹದನಾದಸ್ತ್ರದೊಳೆಂದು ಪೇಳುತವರಿರ್ದರ್ಕಾನನಂಮೀರುತ । ೧೮

ಗಜಪೋಗುತ್ತಲೆ ಕಂಡುದೊಂದು ಹರಿತಾನಾದಂತಿಯಂ ಸೀಳಿತು
ಗಜಮಂ ಸಿಂಹನಕೊಂದುದೊಂದುಶರಭಂ ಭೇರುಂಡನಾಕಾಲದೊಳ್
ಗಜಸಿಂಹಂಶರಭಂಗಳಂ ವಧಿಸೆತಾಕಾಣುತ್ತಲೊರ್ವಂ ಮಹಾ
ಗಜಭೇರುಂಡನು ಸಿಂಹಮೇಣ್ ಶರಭನಂ ತಾಕೊಂದನೇಂ ವಿಕ್ರಮಂ । ೧೯

ಚಂಪಕಮಾಲಾವೃತ್ತ

ಹರಿಣವಕಾಣುತಸ್ತ್ರದಲಿ ಕೊಲ್ಲಲು ತಾನಿದಿರೆದ್ದಲುಬ್ಧಕಂ
ಕರುಣವತಾಳಿ ಬೇಡತಿಯುಬೇಡೆನ ಲಾತನುಮೀರಿಗರ್ಜಿಸಲ್
ಹರಿಣದಚಕ್ಷು ತನ್ನನಯನಂಗಳ ಪೋಲಿಹವೆಂದುತೋರಲಾ
ಕರದಿಹಶಸ್ತ್ರಚಲ್ಲಿ ಬಿಗಿದಪ್ಪಿದನಂಗನೆಯಂ ಸುಮೋದದಿಂ ॥ ೨೦

## (ಕಂದಪದ್ಯ)

ಮತ್ತೊರ್ವಂ ಹರಿಣಿವತಾ
ಕತ್ತರಿಸಲು ಬಿಡಲುಬಾಣವಾತನಸತಿತಾಂ
ಚಿತ್ತದಲನು ತಾಪಿಸಲವ
ಕತ್ತರಿಸಿದಬಿಟ್ಟಬಾಣ ವಿನ್ನೊಂದರೊಳಂ ॥ ೨೧
ಸುದತಿಯು ಪಿಡಿದಿಹಛಲಕಾ
ಮದವಾರಣ ಶಿರದವುತ್ತು ತಾಂತರಪೋಗು
ತ್ತದರಿಂ ಸತ್ತಂ ಶಬರಂ
ಸದರಂತಾನಲ್ಲ ಮೀರಿದವರೊಳ್ಕಲಹಂ । ೨೨

## (ಚಂಪಕಮಾಲಾವೃತ್ತ)

ಶಬರರ ಘಾತಿಗಂಜಿಶಿಶುಕಾಂಕ್ಷೆಯಬಿಟ್ಟವು ಪೆಣ್ಮೃಗಂಗಳುಂ
ಕುಬಿಬಿಸಿಪೋಗೆ ಚೀರಿಶಿಶುಗಾಬರಿಯಿಂ ಸಲೆಬೀಳ್ದುದುಃಖದಿಂ
ದಬುಜಭವಾಂಡದಲ್ಲಿ ಪೊರಳಾಡುವ ದೀಕ್ಷಿಸಿಲುಬ್ಧಸೈನಿಕರ್
ಪ್ರಭುವಿಗೆ ತೋರಿಹಿಂಸಿಸದೆ ಬಿಟ್ಟರುಬಾಲರನಾವಕೊಲ್ಲುವಂ । ೨೩
ಕಡಿದರು ಕಾಡಕೋಣಪುಲಿ ಸಿಂಹಗಜಂಗಳಚಲ್ವಚಿರ್ಚಮಂ
ಬಡಿದರು ಸರ್ಪಮುಂಗುಲಿ ಮೊಲಂವೃಕಋಕ್ಷ ಬಿಡಾಲವರ್ಗಮಂ
ಪಿಡಿದರು ಹಂಸಕೇಕಿಶುಕಸದ್ರ್ಪ ಮಯೂರಪತಂಗಸಂಘಮಂ
ನಡೆದರು ಘೋರಮಿರ್ಪಮೆಳೆಕಂಥರ ಗಂಹರಪೊಕ್ಕುಬೇಡರು । ೨೪
ಮೃಗಧರರಾಗಿ ಭೈರವನರೂಪದೆ ಚರ್ಮವಪೊತ್ತುಸರ್ಪಮಂ
ಬಿಗಿಯುತರುಂಡಮಾಲೆಗಳ ಕರ್ಕಶರೂಪವತಾಳ್ದು ಕೋಪದಿಂ
ದೃಗದೊಳುಕಾರುವಗ್ನಿ ಜಡೆಗಟ್ಟಿಹಕೇಶದೆಕಾಲನಾಶದಿಂ
ನಗೆಮೊಗಮಿಳ್ತುಗೂಡಿ ಮೃಗದಕ್ಷಿಗೆಕಂಡರು ಘೋರಲುಬ್ಧಕರ್ । ೨೫

## ( ಕಂದಪದ್ಯ )

ಶಬರರ ಶಬುದಗಳಬ್ಬರ
ವಬುಜಭವಾಂಡವನು ತೀವಿಮೆರೆದುದುತಾಮೇ
ಣ್ಣ ಭೆಕಡಿರಿತು ಪದಹತಧೂ
ಳಬಬಾಬಣ್ಣೆ ಪೊಡೆಶಕ್ಯವಲ್ಲೆಲೆರಾಮಾ । ೨೬

## ಉತ್ಪಲಮಾಲಾವೃತ್ತ

ಬಂದುದುವ್ಯಾಘ್ರವೊಂದು ಗವಿಯಿಂದಲಿ ಕಾಣುತಲಿರ್ವಲುಬ್ಧಕರ್
ಕೊಂದೆಪೆವೆಂಬ ವಿಕ್ರಮದೆಯಾಪುಲಿಯಂ ನಡುವಿಟ್ಟುಬಾಣವ
ನ್ನೊಂದೆಯೆ ರೇಖೆಯೊಳ್ಬಿಡಲು ವ್ಯಾಘ್ರದಕಾಯುವ ಪಾರುಗೈದುತಾ
ಬಂಧುರಬಾಣತಾಗಲಿಕೆ ಬೀಳ್ವರು ಮೂವರುಭೂಮಿಗಾಕ್ಷಣಂ । ೨೭

## ವಚನ

ಮತ್ತೊರ್ವಕಿರಾತಂ ಮತ್ತನಾಗಿಮತ್ತ ಗಜಮಂಕೆಣಕಲದು ಬೆನ್ನಟ್ಟಿ ಬರಲೊಂದದ್ರಿಯಂಕಾಣುತಂ ತಾಮರೆಯಾಗಲೆಂಬಹಂಬಲಂ ಬಟ್ಟುಭರದಿಂ ದೋಡಲಲ್ಲಿರ್ಪಚಿತ್ರಾಂಗಂಕಂಡು ಮುಳಿದುಬರೆಬೆದರಿಗತಿಯಾವುದೆಂದರಸಿ ವಾಪಿತಟದೊಳೊಂದು ತರುವಿರಲದನೇರುತಂ ಬದುಕಲೆಂಬಹುರುಪಿನಿಂ ಭೂರುಹಮನೇರಲಲ್ಲೊಂದುಸರ್ಪಂಪೆಡೆಯನೆತ್ತಲ್ಕಂಡುಕಾತರಿಸಿಯಾವೃಕ್ಷ ಶಾಖೆಯಂ ಪಿಡಿದುತಾನಿಳಿಯಬೀಳ್ದು ಕೆಳಗೆಪ್ಪಾರಬೇಕೆಂಬಮನವಂ ಮಾಡೆ ನಡುಭಾವಿಯೊಳಪಾರನೀರನುಂ ನೀರಿನಲ್ಲಿರ್ಪಮಕರಂಗಳಂಕಂಡು ಶಿಥಿರ ನಂನೆನಿಸಿ ಮುಂದೇನುಗತಿಯೆಂದಿಂತೆಯೆ ರೆಂಬೆಯೊಳ್ಕಾಲಕಳೆವೆನೆಂದತಿ ದುಃಖದಿಂದಿರಲಾವಟಶಾಖೆಯನ್ನೊಂದುಮೂಷಕಂಕೊರೆಯುತಿರೆಪ್ರಾಣಹಾ ನಿನಿಶ್ಚಿತ ಮೆಂದರಿದಳುತಲಿರ್ಪಾಗಲಾವ್ಯಾಘ್ರಂತದ್ವೃಕ್ಷದೊಳಗೊಂದು ಮಧು ಕುಂಭಮಿರಲದರ ಪನಿಪನಿಜೇನ್ಮೊಗದ ಮೇಲೆಬೀಳುತಿರೆ ನಾಲಿಗೆಯಕೊ ನೆಯಿಂ ನೆಕ್ಕುತ್ತಿರ್ದನೀಭವದೊಳಗಿನಿತಿರ್ಪದುಃಖಮಂ ಮರೆದುಕ್ಷಣಸುಖ ಕೆಳಸಿತೋಃಷ ಪೊಂದುವಧಮನರರಂತೆ ಕೇಳೆಲೆಸಿದ್ಧರಾಮಾ । ೨೮

## ಕಂದಪದ್ಯ

ಇಂತೆಸೆವಬೇಟೆಯಬ್ಬರ
ಕಂತುವಿನಾರಾತಿಯಂತ್ಯದಂತದುತೋರಲ್
ಮುಂತೋರ್ಪ ಚೂತದಡಿಯೊಳ್
ಸಂತಸವಿಶ್ರಾಂತಿಗೊಂಡ ನನಿಮಿಷರಾಯಂ । ೨೯

ಬಂದುದು ಕಿನ್ನರಮಿಥುನಂ
ಕಂದಕದಿಂಪಾಯ್ದು ನೋಡಲಾಕ್ಷಣರಾಯಂ
ಬಂಧುರವಾಜಿಯನೇರುತ
ಮುಂದರಿದಂ ಪಿಡಿಯಲೆಂಬಹವಣಿಕೆಯಿಂದಂ । ೩೦

ರಾಯಂ ಕಿನ್ನರನಟ್ಟಲ್
ಬಾಯಂಮಾಡುತಲಿ ಯವನಸೈನಿಕರೆಲ್ಲರ್
ನಾಯಿಯ ಕಣ್ಣಿಯ ಬಿಚ್ಚುತ
ಜೀಯನಸಂಗಡಮೆಪೋದರಾಗರ್ಭಟದಿಂ । ೩೧

[ಚಂಪಕಮಾಲಾವೃತ್ತ]

ಎಲೆಎಲೆ ಬೇಗಬಾಣಬಿಡು ಬೀಸುಸುಪಾಶವನಿಕ್ಕುಭಲ್ಲೆಯಂ
ಬಲೆಯನುಪಾಸು ಶ್ವಾನಗಳಕಣ್ಣಿಗಳುರ್ಚುವದೆಂದು ಸೈನಿಕರ್
ಬಲುಭರದಿಂದ ಪೋಗೆಮೃಗಪೋದವು ಕಾಡಿನೊಳಾಗರಾಯತಾಂ
ಸುಳುವದು ಕಾಣದಂತೆ ಮರೆಯಾದನು ಕಿನ್ನರನಟ್ಟಿಪೋಗಲು । ೩೨

## — ವಚನ —

ಇಂತಪ್ಪರಾಯಂಭ್ರಾಂತಿಯಿಂ ಮಿ ಥು ನ ಮ ಂ ಬೆಂಬತ್ತಿಪೋಗಲಾಮೃಗಂ ಹಸ್ತಗತವಾಗುವಂದದಿಂ ತೋರುತಂ ಪಿಡಿಯಲೆಸಗಲ್ಕೊಂ ದೋಡು ತಂಶತಯೋಜನದಳತೆಯೊಳ್ತೊಲಗಲವುಗಳಂ ಬೆಂಬಿಡಿದುಪೋಗಲಾತನದಳಮೆಲ್ಲಂ ಕಾಡಿನೊಳ್ಸಿಡುಕುತಂಬಳಲುತಳಲುತಂ ಬೇಸರಿಂಬೆಂಡಾಗಿಬಸವಳಿದು ಮರಳಿತಮ್ಮಪ್ರತಿಯರನ್ನೊಡಗೂಡಿ ನಿಜನಗರಮಂಪೊಕ್ಕರ್॥ ೩೩

## ಕಂದಪದ್ಯ

ಸಿದ್ಧನೆಕೇಳ್ವೆ ರಾಯನು
ಭದ್ಧಸುಕೋಪದಲಿ ಬಿಡದೆಬೆನ್ನಟ್ಟೆರೆತಾ
ವೆದ್ದವು ಪ್ರಾಣದಭಯದಿಂ
ಸಿದ್ಧಾದ್ರಿಯ ಶಿಖರವನ್ನುಪೊಕ್ಕವು ಮೃಗಗಳ್ । ೩೪

(ಮತ್ತೇಭವಿಕ್ರೀಡಿತವೃತ್ತ)

ಬಸವಂಯೋಗದೊಳಿರ್ಪ ಸಿದ್ಧಗಿರಿಯಂ ಪೊಕ್ಕಾಮೃಗಂ ಪೋಗಲುಂ
ತುಸುವಾಲಸ್ಯನಗೊಳ್ಳದಂತೆನರಪಂ ಬೆನ್ನಟ್ಟೆಪೋಗುತ್ತಿರಲ್
ಬಿಸಿಲೊಳ್ಗಾಬರಿಯಿಂದಲಶ್ವವಡಿಯಂ ನಿಂದಲ್ಲೆ ತಾಂನಿಲ್ಲಿಸಲ್
ವೆಸನಾಕ್ರಾಂತ್ರನೃಪಂತೃಷಂ ಬಡೆಮುತಾಂನ್ಮುಂ ಪೋಪುದಂಮಾಣ್ಚಿದಂ।೩೫
ಬಿಸಜಪ್ರೀಯನು ಮಧ್ಯಬಾನೊಳಿರೆತಾಪಂ ಬೆಂಕಿಯಂತಿಕ್ಕೆತಾಂ
ಬಿಸಜಂತಾನೆ ನಿಪಾಸ್ಯಕಂದಿನರಪಂ ಕಂಗೆಟ್ಟುದಾಹತ್ವದಿಂ
ಬಿಸಜಂ ಪುಟ್ಟುವತಾಣಮೆಲ್ಲಿಹರನೇ ನೀತೋರ್ಪುದೆಂದೆನ್ನುತಾ
ಬಿಸಜಾಕ್ಷಾಣ್ಮನ ಧ್ಯಾನಗೊಳ್ಳುತಲೆ ತಾನತ್ತಿತ್ತಲುಂನೋಡಿದಂ । ೩೬

## ಕಂದಪದ್ಯ

ಪುಡುಕಿದನಾವನವೆಲ್ಲವ
ನೆಡಬಿಡದೀಕ್ಷಿಸುತ ದಾಹತಾಪದೆರಾಯಂ
ಸಿಡಿಮಿಡಿಗೊಂಡನು ಮನದೊಳ
ಗಡಿಯಿಡಲಸದಳಮುದಾಯ್ತು ಘನತೃಷೆಯಿಂದಂ । ೩೭
ನೆರಳಂ ಕಾಣಲ್ಕಿಲ್ಲುಸ
ಭರದಿಂ ತಾಳದಲೆಮತ್ತೆ ಪುಡುಕುವನಾಗಳ್
ಪೊರಳಾಡುವನತಿದುಃಖದೆ
ಹರಣವು ತಾನುಳಿಯದೆಂದು ಬೇಗುದಿಗೊಂಡಂ । ೩೮

# ವಚನ

ಇಂತನಿಮಿಷೇಂದ್ರಂತೃಷೆಯಿಂ ಬಳಲುತಂ ಸಾರಸಮನುಂಪುಡುಕಿ
ಪುಡುಕಿಕಾಣದಿರೆ ತನ್ನದೈನವಮಂ ಜರೆಯುತಂ ತಾನಿಂತೆಂದಂ || ೩೯

[ಮತ್ತೇಭವಿಕ್ರೀಡಿತವೃತ್ತ

ಎಲೆಪ್ರಾರಬ್ಧವೆ ನನ್ನನೀಗವನದೊಳ್ನೀತಂದು ನನ್ನಾಪ್ತರಾ
ನೆಲೆಯಂವಾರಿಸಿ ಜೀವನಾಶತೃಷೆಯುಂ ಮಾಡಲ್ಕೆನಾನಂಧದೇಂ
ಛಲಮಂ ನಿನ್ನೊಳಗಿತ್ತೆತೋರಿನುಡಿಯೈ ಯೋಗೀಶಕಾರುಣ್ಯದಾ
ಬಲತಾಂ ಕುಂದಲದಾವದೋಷವಿಹುದೈ ಪೇಳೆಂದನಾಭೂಮಿಪಂ | ೪೦

(ಕಂದಪದ್ಯ)

ಗುರುಕರುಣವಿರುವ ಮನುಜಗೆ
ದೊರೆವವು ಸುಖ ನಾರಿಕೇಳಜಲದಂತಿರೆತಾಂ
ಗುರುಕರುಣ ಪರಿದ ಮನುಜಗೆ
ಬರಿದಪ್ಪುದು ಕರಿಯದುಗಿದ ಬೆಳವಲದಂತೆ | ೪೧
ಆದರಿಂನಾನಾಗುರುವಿನ
ಮುದದಾಜ್ಞೆಯುಮೀರಿ ಪಾಪಗೈದೆನೆದೇವಾ
ಉದಕವಕಾಣದಹದನವು
ದಿದುತಾನೆನಗೀಗ ತೋರದೆಂದಂ ಮರುಗಿ || ೪೨
ಇಂತನುತಾಪದೊಳ ನಿಮಿಷ
ಭ್ರಾಂತಿಯೊಳಂತಿರುಗುತಿರಲು ತೋರಿದುದಾಗಳ್
ಸಂತೋಷದ ನಿಬಿಡಂಜಲ
ಜಂತುಗಳಾವಾಸಮಾದ ಸಾರಸವೊಂದುಂ | ೪೩

(ಚಂಪಕಮಾಲಾವೃತ್ತ)

ಪೊಳೆಯಿತುಸಾರಸಂ ಮೆರೆವಹಂಸಗಳಿಂ ಮಿಗೆಕೋಕಜಾಲದಿಂ
ನಳಿವಳಿಸಂಘದಿಂ ಕಮಲನಾಳಗಳಿಂ ಘನವಾರಿಪೂರ್ಣದಿಂ
ದುಲಿಯುವಸರ್ವಜಾತಿ ಮೃಗಪಕ್ಷಿಗಳಿಂ ನವರತ್ನ ತೇಜದಿಂ
ಜಲಚರಜಂತುವಿಂ ಪರಮಕಾಂತಿಯ ಬೀರುತರಾಜನಕ್ಷಿಗೆ । ೪೩

(ಕಂದಪದ್ಯ)

ಕಂಡನುಮಹದಾನಂದವ
ಕೊಂಡಸು ತೃಷೆಯಲ್ಲಿ ನೋಡಿಸಾರಸಮನುತಾ
ನಂಡಲಿಯುತ ಬಂದಂಭರ
ಗೊಂಡಾಸರಕೇಶಬಲ್ಲನಾತನ ಮುದಮಂ । ೪೪

(ಮತ್ತೇಭವಿಕ್ರೀಡಿತವೃತ್ತ)

ಒಡಲೊಳ್ತೋರ್ದವು ಮೀನಗಳ್ಮಕರಗಳ್ಮಂಡೂಕಗಳ್ತಾವರ್ಮಗಳ್
ಜಡಜಾತಾನ್ವಿತ ಚಕ್ರಗಳ್ಬರಮೆಗಳ್ಬಾನೇ ಭಗಳ್ಹಂಸಗಳ್
ಬಿಡದಾತಂತುಸುನೋಡಲಿಲ್ಲಸೊಬಗಂ ನೀರ್ಗಂಡು ಸಂತೋಷದಿಂ
ಕಡುಚಲ್ವಂಪಡೆಯುತ್ತ ಸಾರಸವಪೊಕ್ಕಂರಾಜ ಕೇಳ್ರಾಮನೇ । ೪೫
ತಳದೊಳ್ತೋರುವ ಪಚ್ಚರತ್ನದಿತಿಯಿಂ ಮಧ್ಯತ್ವದೊಳ್ಕೆಂಪಿನಿಂ
ತೊಳಪಾಕೆಂದಳ ರೋಚಿಯಿಂದಿರದೆ ತಾ ಮೇಲ್ಭಾಗದೊಳ್ಕೇತಕೀ
ಕಲೆಯಿಂ ಝೇಂಕರಿಸುತ್ತಪಾರ್ವಳಿಗಳಾಚ್ಛಾದತ್ವದಿಂ ಕೋಕದಾ
ನಿಳಯಂ ಬೀರ್ಪಪ್ರಕಾಶದಿಂದ್ರ ಧನುತಾನೆಂಬಂತೆಪೋಲ್ತೋರಿತು । ೪೬

(ಕಂದಪದ್ಯ)

ಅಳಿಯುಸುವರ್ಗಂಮಿತ್ರನ
ಕೆಳೆತನ ಸುತರಂಗಲೀಲೆಸಿರಿಯಾವಾಸಂ
ನಿಳಯಾನುಕೂಲಕಾಂತಾ
ಬಲದಿಂ ಸಂಸಾರಿಯಂತೆ ತೋರಿತುಸರತಾಂ । ೪೭

(ಚಂಪಕಮಾಲಾವೃತ್ತ)

ಅಳಿದುಳಿದಿರ್ದುಭಂಗಮುಗುವಾಗಿಸ ರಾಜಿತಸೈನ್ಯಮಲ್ಲವೈ
ನಳನಳಿಸುತ್ತ ಕೂಡಿಕುಮುದತ್ತ್ವದಿ ತಾಖಳರಂಗಮಲ್ಲವೈ
ಬಲುವಿಷಮಿರ್ದೊಡಂ ಪರಮವಾಸುಕಿದಂತದ ರೀತಿಯಲ್ಲವೈ
ಹಲಸುಮನಂಗಳಂ ತಳೆದುಸಾರಸಿತಾನಿಳೆದೇರನಲ್ಲವೈ । ೪೮

# ವಚನ

ಇಂತಚ್ಚರಿಯಂ ಗೊಳಿಪಪುಷ್ಕರಣಿಯಂ ಪೊಕ್ಕಾನೃಪಂಮನಾನಂದದಿಂ ನೀರ್ಗುಡಿಯಲೆಂದುಗ್ಗಡದಿಂ ಕಾರ್ಬೊನ್ನದಸ್ತ್ರಂಗಳ ನಿಳುಪುತಿನ್ನಸುಗತವಾಗುವನಿತಕಾ ಪರಬ್ರಹ್ಮಗುರುವರಂ ವೃಷಭಯೋಗೀಶಂ ತಾನೆತೋರಿದ ನೀವಾರಿಯನ್ನೆಂದೆನುತಲಾ ನೀರನೀಂಟಲೆಂದು ಹಸ್ತದಿಂ ಜಲಮಂ ಕೊಳ್ಳನಿತಕೇ । ೪೯

(ಕಂದಪದ್ಯ)

ನೆನಪಾದುದುಗುರುವಚನಂ
ಮನದೊಳ್ ಶಿವಲಿಂಗಕಾಣದಲ್ಲದೆನಾನೀ
ಘನಜಲ ಸ್ವೀಕರಿಸಲುಗುರು
ವಿನನುಡಿ ಮೀರಿರುವ ದೋಷಬಹುದೆಂದಂತಾಂ । ೫೦

ಚಲ್ಲಿದ ಹಸ್ತದವಾರಿಯ
ನೆಲ್ಲಿಹುದಾಲಿಂಗಮೆಂದು ಯೋಚಿಸಿವನವ
ನ್ನೆಲ್ಲವನೋಡಲುಪೊರಟಂ
ಬಲ್ಲಿದ ರಾಮೇಶನೋಡು ನಿಷ್ಠೆಯಮನಮಂ । ೫೧

ಅಸುಪೋಗುವಕಾಲಂ ತಾ
ನೆಸೆದಿರ್ದುಂ ತನ್ನಜೀವಬದುಕಿಪ ಜಲತಾಂ
ನೆಸೆಯುತಲಿದು ಸೊಳಿರುತಿರೆ
ತುಸುಮಾದರುಮಾಡಲಿಲ್ಲ ಪಾಣದೊಳ್ । ೫೨

ಉನ್ನತಗುರುವರವೊದಲೊಳ
ಗನ್ನ ಜಲಾದಿಗಳ ಕೊಳ್ವಕಾಲದೆಲಿಂಗವ
ನಿನ್ನಯ ನೇತ್ರದೆ ನೋಡುತ
ನನ್ನಿಯೊಳಂ ಕೊಳ್ವುದೆಂದ ಕಾರಣವೇನೈ । ೫೩

ಆಕಾರಣನೃಪತಾನಾ
ಶೋಕವಸಹಿಸುತ್ತ ನೋಡಿಕಾನನವೆಲ್ಲಂ
ಲೋಕಾಕ್ಷನೇತ್ರಲಿಂಗಂ
ತಾಕಾಣದುಕಾನದಲ್ಲಿ ಪುಡುಕಿದರೊಂದುಂ । ೫೪

ಮರವುರವುರುಗಿದ ಮನದೊಳ್
ಹರಹರನಾನುಳಿಯೆ ನಿನ್ನುವಾಡುವದೇನೈ
ಗುರುವರ ನಿನ್ನಪದಾಬ್ಜದೆ
ಭರದೊಳ್ಸೇರಿಸುವದೆಂದುಬಿದ್ದಂಧರೆಯೊಳ್ । ೫೫

ಗಂಟಲ ವೊಣಗಿತುನಾಲಿಗೆ
ಯಂಟಾಗುತದಂತದಲ್ಲಿ ಶಿಲ್ಕಿರೆನರಪಂ
ನೆಂಟರನಿಷ್ಟರಸ್ಮರಿಸದೆ
ಟೆಂಟಣಿಸುವಗುರುವಿನನ್ನು ಧ್ಯಾನಿಸುತಿರ್ದಂ । ೫೬

## ವಚನ

ಇಂತನುತಾಪದೆ ಯನಿಮಿಷಂ ಬಳಲುವಸಮಯದೆ । ೫೭

## ಮತ್ತೇಭವಿಕ್ರೀಡಿತವೃತ್ತ

ಎಲೆರಾಮೇಶನೆ ಲಾಲಿಸಾಗಲರಸಂ ಮಾಡಿರ್ದತಧ್ಯಾನತಾ
ಬಲವತ್ತಾಗಿ ಸುರೂಪಮುಂ ತಳೆಯಿತೊಮುನ್ನಾದ ಶ್ರೀಸಾಂಬನಿ
ತ್ತಲತಸ್ಯಪವು ಮಾಣ್ಬಕಾಲಮಿಹುದೋನಾಸೇನದಂ ಪೇಳ್ವೆತಾ
ನಿಳೆಯಾಣ್ಮಂ ಪೊರಳುತ್ತ ಚೂತದಡಿಯೊಳ್ನಂದೀಶನಂಕಂಡನು । ೫೮

## (ಕಂದಪದ್ಯ)

ಯೋಚಿಸೆ ರಾಯಂ ಮನದೊಳ
ಗೀಜೀವಿಯು ದೇವಗೂಳಿಯಾಗಿಹುದೆನುತಂ
ಆಚಿನ್ಮಯ ಮೂರ್ತಿಯ ಕಲೆ
ತಾಚಪ್ಪೆಯೊಳಿರ್ಪುದೆಂದು ನೋಡಲ್ಬಂದಂ । ೫೯

ಮಲಗಿದ ಬಸವನನೆಬ್ಬಿಸಿ
ಮಲಹರನಾಕೃತಿಯ ನೊಳ್ಪಹವಣಿಕೆಯಿಂದಂ
ಬಲುನಾಸಂಬಡಲಾತಂ
ನೆಲನಂಬಿಡಲಿಲ್ಲನಂದಿಬಿಟ್ಟಂರಾಯಂ । ೬೦

## ವಚನ

ಆ ಕಾಲದೊಳ್ಸಕಲದಯಾಪೂರ್ಣವೃಷಭಂ ಸುತ್ರಾಮನೆಂಬುವದ
ನ್ನರಿಯದೆಪರರ ದುಃಖಮಂ ಸಹಿಸದೆಮನಮರಗುತರಾಯನಹಡನ
ಮಂಕೀಳಲವನೆಲ್ಲಮಂ ತಿಳುಪೆಚಿನ್ಮಯಜ್ಯೋತಿಯು ಕೂಡಿಹುದೆನ್ನಿಷ್ಟ
ಲಿಂಗವೇನ್ನುರದೊಳ್ತೋರುವೆನಾನೀಸೀಜಲಮಂ ಕೊಳ್ಳುವೆಂದಂ । ೬೧

## (ಕಂದಪದ್ಯ)

ಬದುಕಿದೆ ದೇವನೆನಿನ್ನಯ
ವದನಾಬ್ಜದಿ ಬಂದನುಡಿಯೊಳೀದಿನನಾನುಂ
ಸಪಯದೆತೋರ್ಪುದು ಬೇಗನೆ
ಮದನಾರಿಯರೂಪಲಿಂಗಮೆಂದಂರಾಯಂ । ೬೨

ಕೇಳಿದ ನಂದಿಯುದೀನನು
ತಾಳಿದದುಃಖವನು ನೋಡಲಾರದೆ ಬೇಗಂ
ಶೀಳಿದಪಾದದ ಕೊಳಗದೆ
ಹೊ... ಡುತಲಾಗತನ್ನ ನೇಲುರವನುತಾಂ । ೬೩

ಪ್ರೊಳೆಯಿತುಕೇಳ್ ಶತಪತ್ರದ
ಗೆಳೆಯನಕಾಂತಿಯಲಿ ನಂದಿಲಿಂಗಂ ತಾನುಂ
ಪೆಳೆಯುತಲುರದಿಂಪದತಾ
ನಿಳೆಯಾಣ್ಮನಕೈಗೆ ಕೊಟ್ಟನಚ್ಚರಿಕೇಳ್ಳೆ ! ೬೪

[ಚಂಪಕಮಾಲಾವೃತ್ತ]

ಅರಿಯಲೆಸಿದ್ಧರಾಮ ಬಸವೇಶನು ತನ್ನಯಲಿಂಗವಿಕ್ಕಲು
ಪುರಹರಕೊಟ್ಟವಾಕ್ಯದಲಿ ತ್ರೋಂದಶಕ್ರಗೆಪೂರ್ವಭಾವಮಂ
ಧರಿಸುತಹಸ್ತದಲ್ಲಿ ಸುರಪಂ ಮನದಂದುಗತಾಳ್ದು ಮುನ್ನಿನಾ
ಪರಿಯನು ಚಿಂತಿಸುತ್ತಲಿರುತಿರ್ದನು ನಾನದನೆಂತುಬಣ್ಣಿಪೆಂ! ೬೫

(ಮತ್ತೇಭವಿಕ್ರೀಡಿತವೃತ್ತ)

ಸುರರೊಳ್ಪಾಪಿಮದಾಂಧನಾನುಸಭೆಯೋಳ್ನಂ ದೀಶನಂ ನೋಯಿಸಿ
ಭರದಿಂತಾಳಿದೆಶಾಪಮಂ ಮರೆತೆನಾನಿನ್ನೆಂಥ ದುರ್ದೈವಿಯೋ
ಹರನೊಳ್ಕೂಡಲುನಂದಿಬಾರನವತಾನಿಲ್ಲಿರ್ದರೆನ್ನಾಶಿವಂ
ನರಜನ್ಮಂ ಬಿಡದಂತೆ ಮಾಳ್ಪನಿದಕೇಂಗೈಲೆಂದತಾಯುಕ್ತಿಯಂ ! ೬೬

(ಕಂದಪದ್ಯ)

ಅಷ್ಟಾವರಣವಿಭೂಷಿತ
ಶ್ರೇಷ್ಠನಂದೀಶನಿವನು ತನ್ನಯತನುವೊಳ್
ಇಷ್ಟಸುಲಿಂಗಮದಿಲ್ಲದೆ
ತೃಷ್ಟಿಯೊಳಿನ್ನುಳಿಯಲಾರನೆಂದಾಶಿಸಿದಂ | ೬೭
ಅಂಗವೆಲಿಂಗವುತನ್ನಯ
ಲಿಂಗವೆಮಹದಂಗವಾಗಿ ಲಿಂಗಾಂಗದೊಳಂ

ಪಿಂಗದೆಕೂಡಿಹನೀತನ
ಲಿಂಗವಕೊಂಡೊಯ್ವೆನೆಂದು ಮನದೊಳ್ಬಗೆದಂ । ೬೮
ಕಪಟದೆಲಿಂಗವನೊಯ್ದರೆ
ಚಪಲನು ಬಹನಲ್ಲದೆನಗೆನರಜನ್ಮವತಾ
ತ್ರಿಪುರಾರಾತಿಯುಮಾಣಿಪ
ನಪರಾಧವದಾಗದೆಂದು ಮನದೊಳ್ಬಗೆದಂ । ೬೯

ಆರ್ಪುಟ್ಟಿಪುರೀದೇಹವ
ನಾರ್ಬೆಳೆಪರು ಮುಂದೆದಾರದೊಯ್ವುವರವರು
ಮಾರಾರಿತಾನದಲ್ಲದ
ಲಾರುಂ ನಿಜಮಲ್ಲ ಸುಳ್ಳೆಭ್ರಾಂತಿಯಜನ್ಮಂ । ೨೪

ಸಿರಿವಂತರ ವರಗ್ರಹದೊಳ್
ಪರಿಪರಿಪಾಕವನು ಗೈದುತಾಭುಂಜಿಸದೆ ॥
ಪೊರಟೆದ್ದು ಪೋಗುವಾಳಿನ
ತೆರನಂ ಪೋಲುವದು ನರರಮನಸಿನ ಭ್ರಮೆತಾಂ । ೨೧

ಎಲ್ಲಕ್ಕೀಶ್ವರನಿಹತಾಂ
ಬಲ್ಲಿದನಾನೆಂಬಹಮ್ಮು ಮನುಜಗೆಹೊಲ್ಲಂ
ಎಲ್ಲಾಕೃತಿಶಿವನಿಂದದು
ವೆಲ್ಲಾನಿಜವೆಂದು ತಿಳಿಪುಸಂಕ್ರಂದನನು । ೨೩

## ವಚನ

ಇಂತುಪಲಬಗೆಯಿಂದಾಲೋಚಿಸಿ ಸುತ್ರಾಮಂಲಿಂಗವನ ಪಹರಿಸಿಪ
ಮಹದಾರೋಪಮೆನ್ನಿಂ ದಲ್ಲವೆಂದುನಿಶ್ಚಯಿಸಿ ವೃಷಭನಿಷ್ಟಲಿಂಗಮಂ
ಕೊಂಡು ಶಿವಪುರಕೋಡಿದಂ । [illegible]

# ಗದ್ಯ

ಇದು ಶ್ರೀಮದ್ವೀರ ಶೈವಾಚಾರ್ಯ ರೇಣಶಾಂತವೀರ ದೇವರೊಡ್ಡ ಲಬುಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ನ ಮಹಾಕಾವ್ಯದೊಳ್ ಶವಾಶ್ವಾಸಂ ಸಮಾಪ್ತಂ ಅಂತುಸಂಧಿ ಪತ್ತ್ರಕ್ಕಂ ಗದ್ಯ ಪದ್ಯಂಗಳೆಂಟುನೂರಾ ಹನ್ನೊಂದಕ್ಕಂ ಮಂಗಲಮಹಾ.

# ಏಕಾದಶಾಶ್ವಾಸ ಪ್ರಾರಂಭ.

## ಶಾರ್ದೂಲವಿಕ್ರೀಡಿತವೃತ್ತ

ಪಾಪಂಕಂತಪಿತಾಕ್ಷನಾಪಿಶಿರಗೊಳ್ಗಂ ಗಾಂಜಿಯಂ ಸೇರಿಪ್ಪೈ
ಕಾಪಂಗರ್ಪವತೋರಿ ಪುಟ್ಟುತನು ಪೊಳೀ ಭಸ್ಮನುಂ ಬೀರಿಪ್ಪೈ
ಪಾಪಂಯಜ್ಞವಬಿಟ್ಟು ಮಾಡಲರಿಯಂ:ಫಾಲಾಕ್ಷಿಯೊಳ್ತೋರಿಪ್ಪೈ
ಪೇಪಂನೀನೆಯೆನಿನ್ನದಾರ್ಗೆಬಹುಪ್ಪೈ ಪಾಶಂಗಳಂ ಪಾರಿಸ್ಪೈ । ೧

ಗಂಗಾಮೌಳಿಯನಂಗನಾಶನನಘಂಲಿಂಗಾಂಗಸಮ್ಮೇಲನಂ
ಶ್ರೀಂಗಾರಾಂಗಕುರಂಗಧಾರಮಹಿಮೋತ್ತುಂಗಾಗ ಮಸ್ಥಾಪಕಂ
ತಿಂಗಳ್ಪನ್ನಿದಿನೇಶಕಂಗಳಲಸತ್ಸಂಗೀತದಾಮೋದಕಂ
ಪಿಂಗಾಲಿಂಗನಮಂಗಲಾಂಗಮಹಿಮಂ ತಾಮಾಳ್ಕಿಮಾಂಗಲ್ಯಮಂ । ೨

## — ವಚನ —

ಇಂತನಿಮಿಷೇಂದ್ರಂ ಕಾಂತಾಲಿಂಗನವಮಾಣ್ದಿ ಪತಿಯನ್ನೊಯ್ವ ತೆರದಿಂ ನಂದಿಯುನಗಲ್ಚಿಲಿಂಗಮಂ ಕೊಂಡೊಯ್ದು ಕೈಲಾಸ ಪುರಮಂ ಪೊಕ್ಕುಗಿರಿಜೇಶನೊಳೀ ಹದನಮಂಪೇಳ್ದು ನಂದಿಯ ಬರವನಾಲೋಕಿಸುತಲಿರ್ದನಿತ್ತಲಾನಂದೀಶಂ । ೩

## ಕಂದಪದ್ಯ

ಲಿಂಗವನೊಯ್ಯಲ್ನಂದಿಯು
ಭಂಗಮನಾಳುತ್ತಮನದೊಳಾಲೋಚಿಸಿದಂ
ಕಂಗಳತ್ರಿತಯನೆನನ್ನೀ
ಲಿಂಗವಕೊಂಡೊಯ್ದ ಪಾಪಿಯಾರೆಂದೆನುತಂ ॥ ೪

ಮುನಿಸಿಂಬಂದೆನುನಿನ್ನಾ
ಘನಸಭೆತೊರೆಯುತ್ತಲದಕೆನೀನಿದಗೈದಿಂ
ದೆನುತಲಿನೆನೆದನುಮನದೊಳ್
ಚಿನುಮಯನಂ ನಂದಿಲಿಂಗಪೋದಚ್ಚರಕೆ ॥ ೫
ಆರಿಹರೆನ್ನಯಲಿಂಗವ
ನಾರೈವುತಬಂದುಚೋರತನದಿಂ ದೊಯ್ದರ್
ಮಾರಾರಿತಾನದೆನ್ನೊಳ್
ಪೂರಿತಕರುಣವನುತೊರೆದನೇ ನಕಟಕಟಾ ॥ ೬

## ಮತ್ತೇಭವಿಕ್ರೀಡಿತವೃತ್ತ

ನೆನೆದಂಸೂಕ್ಷ್ಮವಿಚಾರದಿಂದಬಳಿಮಂ ಸುತ್ರಾಮನೀರೂಪದಿಂ
ಜನಿಸುತ್ತೆನ್ನಯಲಿಂಗಕೊಂಡುಹರನೊಳ್ಕೂಡಿರ್ಪನೆಂದೆನ್ನುತಂ
ಮನದೊಳ್ನಿಶ್ಚಯಮಾಡಿಲಿಂಗವಗಲುತ್ತಾನೆಂತುಬಾಳಿರ್ಪೆನೈ
ಘನಪಾಪಾತ್ಮಕನಾಗಲಾರೆನಿದಕೇನಂ ಗೈವೆನಾಂ ಯುಕ್ತಿಯಂ । ೭

## ಕಂದಪದ್ಯ

ಎಲೆದೇವನಿನಗೆನಾನೇಂ
ಕಲಹಂದೋರಿದೆನುನೀನದೆನ್ನನ್ನಗಲ್ದಂ
ಕಲುಷಂಪೂರಿತಶಕ್ರನ
ಸಲುಗೆಯೊಳಂ ಕೂಡಿಪೋದೆಯೆುಚಿತವೆನಿನಗೆ ! ೮
ಕಳುಹಿದೆಯನಿಮಿಷಕಾಂತನ
ಕಿಳುಹಿದೆಯಂತರವನದಕೆಯವಕೊಂಡೊಯ್ದಂ
ಕಳವಿನಲಿಂಗವನೀನೆಂ
ತಳುಕದೆಪಡಕೊಂಡೆದೇವ ನೀನಿದಪೇಳ್ಳೆ ॥ ೯

## ವಚನ

ಎಂದಾಲೋಚಿಸುತಲಾನಂದೀಶಂ ಲಿಂಗವನಗಲಿತಾಂ ವ್ಯಸನಾಂಬು
ಧಿಯೊಳಾಳುತಿಂತೆಂದಂ । ೧೦

### (ಮತ್ತೇಭವಿಕ್ರೀಡಿತವೃತ್ತ)

ಭವದೊಳ್ವಾಸವಗೈಯಲಾನು ಮರೆಯುತ್ತಿನ್ನಾತ್ಮ ಸಚ್ಚಿತ್ತದೊಳ್
ಭವವಂತಾರಿಪಧ್ಯಾನವನ್ನಳಿದೆನೋ ಮೇಣಾವದುಷ್ಕರ್ಮಮಂ
ಶಿವನೊಳ್ತೋರ್ದೆನೊಲಿಂಗನಿಷ್ಠೆಯಲಿ ನಾನೇಂಭಂಗಮಂಗೈದೆನೋ
ದಿವಪಾಲಂ ಮರೆನೋಸಗೈದಹದನಂ ತಾನೆಂತುವೇಳೆಂದನು । ೧೧

### (ಚಂಪಕಮಾಲಾವೃತ್ತ)

ಪತಿಘನಲಿಂಗಹೃದಯಾಂತರವೇಸತಿಯೆಂದು ಲಿಂಗವೇ
ಗತಿತಮಗೆಂದು ಲಿಂಗದೊಡನಾಟವು ಲಿಂಗದಮೇಲೆಪ್ರೀತಿತಾ
ಪತತದಿ ಲಿಂಗಸಂಗರಿಗೆ ಸತ್ಯವು ನಾಘನಲಿಂಗಮಿಲ್ಲದೀ
ಕ್ಷಿತಿಯಲಿ ಜನ್ಮದೋರಿ ಭವಿಯೆಂದಪುದೀನರ ಲೋಕಸಾಧ್ಯವೇ । ೧೨

### ( ಕಂದಪದ್ಯ )

ಬಸವಳಿದಂ ಮನದಲಿತಾ
ಬಸವೇಶಂ ದುಗುಡಗೊಂಡು ಲಿಂಗವನಗಲು
ತ್ತ ಸಮಾಕ್ಷನಾಮಸ್ಮರಣೆಯ
ನುಸುರುತ್ತಲಿ ತಾಪದಿಂದಲುರುಳ್ದಂಧರೆಯೊಳ್ । ೧೩
ಮೊದಲಿನ ತೆರಶಿವಸಭೆಯ
ಳ್ಸೊದಗುವದೆಂತೆನಗೆ ಮುಂದೆ ಶೌರ್ಯಂಧೈರ್ಯಂ
ಕದನವನೇತಕೆಗೈದೆಂ
ಮದನಾರಿಯ ಚರಣಬಿಟ್ಟದೇತಕೆಬಂದೆಂ । ೧೪

## ವಚನ

ಇಂತುನಂದೀಶಂ ಪಲಬಗೆಯಿಂ ಪಲುಂಬಿನೆಲವೊಳ್ಪೊರುಳುತಂ
ನೆರೆಳುತ್ತುಮಿರ್ಪಾಗಳ್ ।೧೫

### [ಮತ್ತೇಭವಿಕ್ರೀಡಿತವೃತ್ತ

ರವಿಯುಂಕಾಣಲು ಪಾರಿಪಕ್ಷದಹನಂ ತೋರಲ್ಕೆಹಾಕೈಲಿಲ್ಲದೊಳ್
ಶಿವನಾಮಾಮೃತಧ್ಯಾನಗೊಂಡಿರುವತಾಸಂ ಪಾತಿಯೋಕೋಪದಿಂ
ದಿವಪಾಲಂ ಕುಲಿಶಾಸ್ತ್ರದಿಂ ಕಡಿದಿಹನ್ಪೇತಾದ್ರಿಯೋದೇವತಾ
ಧವನಂಕಾಣದೆ ಶೋಕಗೈವಸುರನಾಗಂ ಕಂಡಪೊಲ್ತೋರಿದಂ ।೧೬

### (ಚಂಪಕಮಾಲಾವೃತ್ತ)

ಮಿಡಕುತಭೂಮಿಯಲ್ಲಿ ಪೊರಳಾಡುವದೀಕ್ಷಿಸಿಶೋಕಗೊಳ್ಳುತಂ
ಪೊಡವಿಯ ಪಕ್ಷಿಜಾತಿ ಮೃಗಸಂಕುಲದುಷ್ಟಬಿಡಾಲವರ್ಗಶಾ
ವಡಿಗಡಿಗಾಗತಮ್ಮಬಲದಿಂದಲೆ ಶಾಂತವಗೈಯಲಾಪೊಡಂ
ಬಿಡದಲೆದುಃಖಗೊಂಡಿಹ ವೃಷೇಶನನೋಡುತ ನಿಂತುಕೊಂಡವೈ ।೧೬
ಚರಿಸದೆ ನಿಂತವಾಗಲರ ಸಂಚೆಗಳಿಲ್ಲವು ತುಂಬಿಗಳ್ರವಂ
ಬರಿಸದೆ ಶೋಕಗೊಂಡವು ಮಯೂರವು ಪಚ್ಚವತೊಯ್ನಿವಾರಿಯಂ
ಧರಿಸುತ ಚಿಮ್ಮಿದೇಹವನು ಶಾಂತಿಯಗೈದವು ಮೀಣ್ಸವಾಕ್ಯದಾ
ದರದೊಳು ಮಾತನಾಡಿಗಿಳಿಗಳ್ಸಲೆ ತೋಷವಬೀರುತಿರ್ದವೈ ।೧೮

### ಕಂದಪದ್ಯ

ಇಂತೆಸೆವನಂದಿಶೋಕದೆ
ಕಂತುವಿನಾರಾತಿ ಮನಕೆತ್ತಾನಿದುಬಂತೇ
ಸಂತಸತಾಳ್ದನೆತಾನೆಂ
ದೆಂತೆನುತಂ ಕೇಳ್ಸಿನೆಂದ ಮನದೊಳಗಾಗಂ। ೧೯

ಈಶನುನನ್ನೀಲಿಂಗವ
ವಾಸವನಿಂತರಿಸಿಮಾನಹಾನಿಯಗೈದಂ
ಸೋಸುತನೋಡಲ್ಕಾಣದು
ಕಾಶಿನೊಳರ್ಥವದು ದೋಷವೆನ್ನೊಳಗೆಂದಂ । ೨೦

ಕೇಳುವೆನಾನವನನುತಾ
ಹೇಳುವನೇನಿದಕೆತನ್ನ ಪ್ರತಿನುಡಿಯನುಮೇಣ್
ಭಾಳಾಕ್ಷನಮನ್ನಿಸೆನಾಂ
ಮೇಲಾಗಿಹದೇವಸಭೆಯೊಳೆಂದಂನಂದಿ । ೨೧

## ವಚನ

ಎಂದುನಿಶ್ಚಯಾತ್ಮಕದಿಂ ನಂದೀಶಂ ಶಿವಪುರಕಾಗಿಪೊರಮಟ್ಟನಿತ್ತ
ಲವನಬರುವಿಕೆಯಂ ನೀರಿಕ್ಷಿಸುತಶಂಕರಂ ನಿರ್ಜರೇಂದ್ರಂಹರಿಬ್ರಹ್ಮ
ರಿಪ್ಪರ್ಗಳ್ಸುರಮುನಿಪನಾರದಂಬಂದನೆಂದುಸುರೆಚರಂ ಕಪರ್ದಿ
ಬರೆಹೇಳಿ ಮುನಿಪಬಂದಂ । ೨೨

## (ಚಂಪಕಮಾಲಾವೃತ್ತ)

ನುಡಿಯುವಪೂರ್ವಸ್ಮರಣೆಯಿಂ ವನಮಾಲೆಯಕಂಠಭೂಷದಿಂ
ಬೆಡಗಿನವೀಣೆಯಂ ಪಿಡಿದಹಸ್ತದೆಪಾದದೆರನ್ನರಕ್ಷೆಯಿಂ
ದಡಿಯಿಡೆಲೋಕಪಾವನವಗೊಳ್ಳುವನಾರದ ಖಿನ್ನಮುದ್ರೆಯಿಂ
ಮೃಡನಡಿಕಂಡುಬಾಳ್ವಗಣಗಳ್ಗವಬಾಗುತ ಬಂದಬೇಗದಿಂ । ೨೩

## ವಚನ

ಇಂತಪ್ಪನಾರದನಂಕಂಡು ಶಿವಗಣರ್ಕಳೆಂದರ್ । ೨೪

## ಮತ್ತೇಭವಿಕ್ರೀಡಿತವೃತ್ತ

ಇದುನಾನುಷ್ಠ್ಯದರಾಶಿಯೋಹರಿಯಧ್ಯಾನಾನಂದಚಿಜ್ಯೋತಿಯೋ
ಇದು [illegible]ವದಕೀರ್ತಿಯೋಶೃತಿಯ ಮೂಲಾಧಾರಸುಸ್ತಂಭವೋ

ಇದುಸದ್ಯೋಗದತೇಜವ್ರೋಯತಿಯವ್ರೋಲ್ತಾಂತ್ರೋರ್ಪವೈರಾಗ್ಯವ್ರೋ
ಇದುಸಾಂಕಾಣೆನುಬ್ರಹ್ಮಪುತ್ರನಿರವಂ ತಾನೆಂಥಗಾಂಭೀರ್ಯನೋ
ನುಡಿವಂತಾನಿಗಮಂ ಗಳುಂಪೊಗಳುವಾ ಶ್ರೀವಿಷ್ಣುನಾಮಂಗಳಂ
ನಡೆವಂ ದೇವನಭಕ್ತಿಯಲ್ಲಿ ತನುವಂತಾನೀಡಿಸಾಷ್ಟಾಂಗಮಂ
ಕೊಡುವಂಕಾಳಿಯಲೋಲನಲ್ಲಿಭಯದಿಂ ಕೊಂಡಾಡುತಾನಾರದಂ
ಬಿಡುವಂ ಹಾಸ್ಯದಮಾತನೆಲ್ಲಮುದಮಂ ಕೊಂಡಂಸುಕೈಲಾಸದೊಳ್ । ೩೦

(ಕಂದಪದ್ಯ)

ಇಂತಹನಾರದಮುನಿಪಂ
ಕಂತುವಿನಾರಾತಿಯನ್ನು ಕಂಡತಿನಯದೊಳ್
ಮುಂತಡ್ಡಬೀಳಲಘಹರ
ಸಂತಸದಿಂದೆತ್ತಿಕೇಳ್ದನಾತನಬರವಂ। ೩೧

ಎಲೆಬಾಲನೀಚತುರ್ದಶ
ವಿಲಸದ್ಬ್ರಹ್ಮಾಂಡಚರಿಸೆಯಾದೊಡೆಪೇಳ್ವೈ
ಕಲುಷಮದಿಲ್ಲದೆಪಾವನ
ನಿಲಯಮದಾಗಿರ್ಪದಾವಲೋಕಮದೆಂದಂ । ೩೨

ಆವನವಾಸಂಪಾವನ
ಮಾವನಸನ್ನಿಲಯವಿಮಲಮಾಗಿರ್ಪುದುಮೇ
ಣಾವನಗೃಹಭಾಮಿನಿತಾ
ಪಾವನಸತಿವ್ರತೆಯಳಾಗಿತಾನಿರುತಿರ್ಪಳ್ । ೩೩

ಇಂತೆಂದುಕೇಳೆಪರಶಿವ
ಕಂತುಪಿತೋದ್ಭವನ ಪುತ್ರನೆಂದಂ ಧರೆಯೊಳ್
ಸಂತಸವಿಲ್ಲೈದೇವನೆ
ಭ್ರಾಂತಿಯು ಪಿಡಿದಿಹುದು ನೋಡಿ ಭೂಲೋಕವನು । ೩೪

## ವಚನ

ಇಂತಾನಾರದಂ ಗಿರಿಜೇಶಗಭಿವಂದಿಸುತ ಲತಿದೈನ್ಯದಿಂ ಭೂಲೋಕ ದಿರವಂ ಪೇಳಲನುವಾದಂ । ೩೧

## ಮತ್ತೇಭವಿಕ್ರೀಡಿತವೃತ್ತ

ಹರಕೇಳ್ಕೈ ಚಂಸುತ್ತಲಾನುಭರದಿಂ ಭೂಲೋಕದೊಳ್ಬಂಪೆನೈ
ನರರೊಳ್ಕಾಣೆನು ಶೈವಭಕ್ತಿಯನು ಮೇಣ್ದಾನಾದಿಸತ್ಕರ್ಮವಂ
ದುರಿತಂ ಕೂಡಿಹಕರ್ಮಿಗಳ್ಧರೆಯ ತಾಂತುಂಬಿರ್ಪರ್ಶೈವೇವನೇ
ಭರದಿಂಹಿಂಸೆಯಗೈವ ಕ್ರೂರಕಟುಕರ್ಕರ್ಕಂಪೂರ್ಣದಿಂದಿರ್ಪರ್ಶೈ । ೩೨

## [ಚಂಪಕಮಾಲಾವೃತ್ತ]

ಕೆಡವಿದರೆಲ್ಲದೇವಗ್ರಹ ಶಂಕರಭಕ್ತರ ಮಂದಿರಂಗಳಂ
ಭಡಿದರು ಭಸ್ಮಶೋಭಿತರಕಾಣುತ ಗರ್ವದೆಲಿಂಗಧಾರಿಯಂ
ಪಿಡಿದರು ಬಾಲವೃದ್ಧರಬಲಾದಿಯರಂ ಶೆರೆಯಲ್ಲಿಕೋಪದಿಂ
ನಡೆದರು ನೀತಿಮಾರ್ಗವನು ನೋಡದೆಕಾಮುಕರಾಗಿಭೂಜರು । ೩೩

## (ಕಂದಪದ್ಯ)

ಈಪರಿಪಾಪದಮಧ್ಯದೆ
ಲೋಪವದಾಗಿಹುದು ಶೈವಭಕ್ತಿಯದೆಲ್ಲಂ
ಕಾಪಾಲಿಯೆಲಾಲಿಸುನೀಂ
ಕಾಪಾಡುವು ದೀಶಭಕ್ತರೆಲ್ಲರ ಬೇಗಂ । ೩೪

## ಉತ್ಪಲಮಾಲಾವೃತ್ತ

ಪಾತಕಮಿರ್ಪಪಾಮುಕರೊಳೊಂದಿದ ಚಿಧ್ಘನನಂತೆಕಾಲನಾ
ಘಾತಕ[illegible]ಜಾಮಿಳನು ತಾನೆನೆಕಾಕಸಮೂಹದೊಳ್ಪಿಕಂ

ಸೋತತೆರಂ ಶಶಾಂಕಶಿಲೆಕಳ್ತಲೆ ಯೊಳ್ನಲುಗಿರ್ಪರೀತಿಯಿಂ
ಘಾತಕರಲ್ಲಿ ತೋರ್ಪಸುವಿವೇಕದ ಪೋಲಿದೆ ಶೈವಭಕ್ತಿಯುು । ೩೫

[ವಚನ]

ಇಂತುತಿವಧರ್ಮಂಕುಂದಂಬಡೆದಿರ್ಪುದನ್ನರಿಯದೀಪರಿ
ಸುಮ್ಮನಿರ್ಪರೆ ಜೀಯಾಯುಂದೆರಗಿವುತ್ತಿಂತೆಂದಂ । ೩೬

(ಮತ್ತೇಭವಿಕ್ರೀಡಿತವೃತ್ತ)

ಧರೆಯೊಳ್ಪುಟ್ಟಿಹಪುಣ್ಯಜೀವಿಗಳುತಾವ್ಮಾಳ್ಪಂಧಯಾಗಂಗಳಿಂ
ಸುರಲೋಕಂನೆರೆತೃಪ್ತಮೆಂದುನಿಗಮಂಗಳ್ಸಾರ್ವವೇನೆಂಬೆನಾ
ನರರೊಳ್ಕರ್ಮಿಗಳಾಗಲೆತ್ತ ಬಹುದೈತಾನಾಹವಿರ್ಭಾಗವಾ
ಹರಿಯಿಂದರ್ಚನೆಗೊಂಬದೇವನರಿಯೈ ನೀನೆಂದನಾನಾರದಂ । ೩೭

(ಕಂದಪದ್ಯ)

ಎಲೆದೇವನಿನ್ನಕೃಪೆಯಂ
ಬಲಮಾಗಿಡದಿಂಥಘೋರಪಾತಕಮೆಲ್ಲಂ
ಕಲೆಯಡಗದುಯೋಚಿಸುನೀಂ
ಛಲಮಾಡುವದೇಕೆಕಳುಹುನಂದೀಶನನು । ೩೮

ಎನ್ನುತನಾರದನೆರಗಲ್
ಬನ್ನಂಬಡೆದೀಶಮನದೆಯೋಚಿಸುತಕಟಾ
ಚನ್ನಿಗನಂದಿಯಕಳಹುತ
ಲೆನ್ನಯಮನವೆಂತುನಿಲ್ವುದೇಗೈವೇಂನಾಂ । ೩೯

ಖೂಳಂಶಂಕ್ರಂಮಾಡಿದ
ಕಾಳಗದಿಂ ಖೇದಮಾಂತುನಂದಿಯುಪೋಗಲ್
ಪಾಳಾಗುತೆನ್ನದೀಸಭೆ
ಕಾಳಾಗಿರುತಿಹುದುಮತ್ತೆಯಗಲುವದೆಂತೈ ೪೦

ಎನ್ನಯಜೀವಂನಂದಿಯು
ಎನ್ನಯತನುಮನವುಧನವುನಂದೀಶಂತಾ
ನೆನ್ನಯಬಳಗಂನಂದಿಯು
ಎನ್ನಯಗುರುನಂದಿಯುವನಬಿಟ್ಟಿರಲಾರೆಂ । ೪೧

( ವಚನ )

ಎಂದಾಲೋಚಿಸಿಕವರ್ದಿಮನದನಿಶ್ಚಿತದಿಂ
ಮುನಿನಾಥಗುಸುರ್ದಂ । ೪೨

(ಮತ್ತೇಭವಿಕ್ರೀಡಿತವೃತ್ತ)

ಸುರಮೌನೀಶನೆನಿನ್ನವಾಕ್ಯಸರಿಯೈ ನಂದೀಶನಂ ನೋಡದೇ
ಪರಮಾಬ್ಧಂಶತಮಾಯ್ತುದೆನ್ನಮನತಾಂಕಂಗೆಟ್ಟು ದೇವೇಂದ್ರನಂ
ಧರೆಗಾನಟ್ಟಿದೆಬರ್ಪುದೆಂದಿಗೆನುತಂನಾನೋಡುವೆಂ ಮಾರ್ಗಮಂ
ತೊರೆದಾಂಪೋಗೊಳಿಸಲ್ಕನಂಗೊಡೆನುಕೇಳ್ನಂದೀಶನಂನಿಶ್ಚಿತಂ । ೪೩

**ಚಂಪಕಮಾಲಾವೃತ್ತ**

ಸಲಿಲದಸಂಗಮಂ ತೊರೆದಪಂಕಜತಾಯುಗಲಿರ್ದಬಾಲಕಂ
ಮಳೆಯನುಕಾಣದಿರ್ದಕೃಷಿಯಾಗವಕಾಣದಮೌನಿಸಂಚಯಂ
ಕಲುಷರಸಂಗದಿರ್ಪಮತಿವಂತನು ಶಿಷ್ಯರಭಕ್ತಿಪೋದನಿ
ರ್ಬಲಗುರುವೆಂತುಜೀವಿಪರುನಂದಿಯನಟ್ಟುತಲೆಂತುಜೀವಿಪೆಂ । ೪೪

**( ಕಂದಪದ್ಯ )**

ಅದರಿಂದನಂದಿದೇವನ
ವದನಾಬ್ಜವನಗಲಿನಾನುಸ್ಸೈರಿಸಲಾರೆಂ
ಹದನವಬಿಡುವದುಮುನಿವರ
ಬದಲಿನ್ನೊಂದಾಶೆಕೇಳುಪೂರ್ಣಂಗೊಳಿಪೆಂ ॥ ೪೫

ಅರಿಗಳಿಗೆ ಯಾದರುಂಬಿಡೆ
ವ್ಮರೆವೋಸಪುದಲ್ಲ ನಂದಿತಾಮವುಪ್ರಾಣಂ
ಧರೆಗವನನೀಗ ಕಳುಹಲ್
ಹರಣವು ಸ್ಥೈರಿಸದಿದುವೆ ನಿಶ್ಚಿತವೆಂದಂ । ೪೬

ಇಂತಾಶಂಕರಂ ಧರೆಯುಜೀವಿಗಳಾಶೆಯಂ ತೊರೆದುನಿಶ್ಚಿಂತದಿಂದು
ಸುರಲತಿಶೋಕದಿಂ ಮುನಿಪಂ ಮತ್ತೆದೈನ್ಯದಿಂ ಪೇಳಲನುವಾದಂ । ೪೭

## (ಮತ್ತೇಭವಿಕ್ರೀಡಿತವೃತ್ತ)

ಮದನಾರಾತಿಯೆ ನಿಷ್ಠೆಯಿಂದುಸುರುತಂ ಸದ್ಭಕ್ತವಾತ್ಸಲ್ಯಮೇಣ್
ಸುದಯಾಪೂರಿತನೆಂಬ ನಿನ್ನಪೆಸರಂ ಪಾಳ್ಗೈದೆ ವ್ಯಾಮೋಹದೊಳ್
ಹದನಂಗೊಳ್ಳದ ಶಸ್ತ್ರಲೋಭಿಧನತಾಂ ಕೋಶಂಗಳಂತುಂಬಲೇ
ನದರಿಂದಂ ಫಲದೋರದ್ಯೆಕಳುಹುನೀ ನಂದೀಶನಂ ಭೂಮಿಗೆ । ೪೮

ಧರೆಯೊಳ್ಸರ್ವರ ಸಾಹಸಂ ಮುಗಿಯೆಮುಂದಾಕಾರ್ಯಮಂ ಮಾಳ್ಪವಂ
ಹರನೆಂದೆನ್ನವ ನೀತಿವಾಕ್ಯಪುಸಿಯೇ ನೀ ಭಕ್ತರಂಪಾಲಿಸಲ್
ವರದೇವಂ ಪಶುಪಾಲನೆಂಬ ಬಿರುದುಂ ಪಾಳಾಯಿತೇನಿಂದಿಗೆ
ಭರದಿಂ ಪೇಳೆಲೆಸಾಂಬ ನಾನುಪೊರಟೆಂ ಮತ್ತೊಬ್ಬನೊಳ್ದೂರಲು ॥ ೪೯

## (ಕಂದಪದ್ಯ)

ಒರ್ವಂ ನಂದಿಯಮೇಲಿನ
ತೋರ್ವಸುಮೋಹಕ್ಕೆ ಪರಮದೇವನೆ ನೀನಾ
ಸರ್ವರಮೇಲಿನ ಕಕುಲತೆ
ತೊರೆವುದು ತಾನುಚಿತಮಲ್ಲಯೋಚಿಸಿನೋಡ್ಕೆ । ೫೦

ದುಷ್ಟರುನರರೆನ್ನುತಲಾ
ಸೃಷ್ಟಿಯನೇಂ ನಾಶಗೈವೆನೆಂಬುವಿಯೋಮೇ
ಣಷ್ಟಾವರಣಗಳಸುವಂ
ನಷ್ಟವಮಾಡುವಿಯೊ ದೇವನೀನಿದಪೇಳ್ಕೈ । ೫೧

ನಿನ್ನುದರದಿರ್ಪ ಲೋಕಂ
ಬನ್ನಂ ಬಿಡುವಾಗ ನೀನುಕಣ್ದೆರೆಯೆವೆಕೇಳ್
ನಿನ್ನಯ ಸುಖದಿಂದಿರುತಿರೆ
ಚಿನ್ಮಯನೆಂದಿಟ್ಟ ನಿನ್ನನಾಮವು ಪುಸಿಯೈ । ೫೨
ಎನ್ನಲ್ಕಾರದ ಪರಶಿವ
ನುನ್ನತಕೋಪದಲಿ ಕಳುಹೆನಾಂ ನಂದಿಯನುಂ
ಮುನ್ನಮೆ ಪೋಗೆಲೊನೀವು
ತ್ರಿನ್ನೊಬ್ಬ ಸುದಾತನಲ್ಲಿ ಪೂರುವುದೆಂದಂ । ೫೩
ಈಬಿರಿದೆ ನಗೀಗಹೆನತೆ
ಯೀಬಹುಮಾನಿತವು ಬೇಡನಾರದ ಮೂರ್ಖಾ
ಜಾಬಿನ ಕುಶಲತೆಬಲ್ಲೆನು
ನಾಬಸವನ ಭೂಮಿಗಿಕ್ಕೆನೆಂದಂಹರತಾಂ । ೫೪

## ವಚನ

ಎಂದಾಶಂಕರಂಕಡಂಗಿ ಘುಡಿಘುಡಿಸುತಲಾ ನಾರದನಂ ಭಂಗಿಸಲ್ ಯತಿಲಲಾಮನತಿ ಕೋಪದಿಂ ತನ್ನಂತರಂಗದೊಳಾಲೋಚಿಸುತಲೀಗ ಬರ್ಪನಂದಿಯನ್ನೀತನಡಿಯೊಳ್ಬಾರದಂತೆ ಸಗುವದುಚಿತಮೆಂದು ದಿಗ್ಗನೇಳ್ದಂ ದ್ವಾರದೊಳಿರ್ಪ ಜಯವಿಜಯರಲ್ಲಿಬಂದು । ೫೫

## —ಃ ಗದ್ಯ ಃ—

ಇದು ಶ್ರೀಮದ್ವೀರ ಶೈವಾಚಾರ್ಯಧು ರೀಣಶಾಂತವೀರ ದೇವರೊಡಲಬುದ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾಕಾವ್ಯದೊಳೇಕಾದಶಾಶ್ವಾಸಂ ಸಮಾಪ್ತಂ ಅಂತೂಸಂಧಿ ಹನ್ನೊಂದಕ್ಕಂ ಗದ್ಯಪದ್ಯಂಗಳೆಂಟುನೂರಾ ಅರವತ್ತಾರಕ್ಕಂ ಮಂಗಲಮಹಾ.

# ದ್ವಾದಶಾಶ್ವಾಸ ಪ್ರಾರಂಭ.

(ಚಂಪಕಮಾಲಾವೃತ್ತ)

ಗಣಪನವಾಹನಕ್ಕೆ ಧರಿಸಿರ್ದಹಿವೈರಿಯದಕ್ಕೆ ತಾಕುಮಾ
ರನ ಶಿಖಿವೈರಿ ಮೌಳಿಶಶಿಗಗ್ನಿಗೆ ವೈರವು ಗೌರಿವಾಹನಂ
ತನಯಗೆವೈರಿ ಪತ್ನಿಯರಮತ್ಸರ ನಿನ್ನಕುಟುಂಬಚಿಂತೆತಾ
ನಿನಿತಿರೆ ಸೈರಿಸುತ್ತ ಖಿಲಲೋಕವರಕ್ಷಿಪೆ ನೀಂದಯಾಘನಂ । ೧

ಗುರುವರನಿಲ್ಲದಿರ್ಪದಿಶೆಯಯ್ಯನ ಪ್ರೇಮದಿ ಬಾಳ್ವದೀಜಗಂ
ವರರವಿಚಂದ್ರಶಂಕರರ ತಾಕರೆಕಳ್ಚುವ ಭಾರತಾಳುತಂ
ಧರೆಗೆಮುದಂಕರಂಗೊಳಿಪಸನಾತನ ಭಕ್ಷಿಪದುಷ್ಟಸರ್ಪಮಂ
ಧರಿಸಿದೆದೇವನೀನದಕೆ ನಿನ್ನಜನರ್ಲಯಕರ್ತನೆಂಬರು ॥ ೨

ಕಂದಪದ್ಯ

ಬರಲಾಕ್ಷಣದ್ವಾರಚರರ್
ಭರದಿಂ ಮುನಿವರನನ ಮಿಸೆಮೋದವಗೊಳುತಂ
ತ್ವರದಿಂಕೇಳ್ದಂ ಕುಶಲವ
ನರಿಯಂ ತಾನೆಂಬರೀತಿಗೈಯುತೆಮುನಿಪಂ । ೩

ಎಲೆಜಯವಿಜಯರೆ ಕೇಳಿರಿ
ಮಲಹರದ್ವಾರದಲಿ ನಿಮ್ಮಸಾಹಸವೇನೈ
ಬಲುಪುಣ್ಯರು ನಿತ್ಯದೆನೀವ್
ಸಲೆಶಿವಗಣವರರ ಪಾದವೀಕ್ಷಿಪಿರೆಂದಂ ॥ ೪

[ಮತ್ತೆಭವಿಕ್ರೀಡಿತವೃತ್ತ

ಎನೆಯೋಗೀಶನ ವಾಕ್ಯದಿಂ ಮನದೆಮೋದಂ ತಾಳುತಾಸೇವಕರ್
ಮುನಿಪಾದಾಬ್ಜಕೆ ಬಾಗಿಪೇಳ್ದರವನೊಳ್ತಾವ್ಮಾಳ್ಪಕರ್ತವ್ಯಮಂ

ಧನಪಾಲಾಪ್ತ ಸದರ್ಶನಕ್ಕೆ ಬರುವಾವೀರಾಧಿವೀರರ್ಕಳಂ
ಧ್ವನಿಮೊರುತ್ತಲಿದೇವಪೇಳ್ವವರೆಗುಂಕಾಯುತ್ತಲಿರ್ದ್ದಿರ್ಪವು । ೫

ಸುರರೋದ್ದಾಮನೆಯಾದೊಡಂ ತಡೆವೆವ್ಯೈಕಾಲಾಂತಕಂ ಪೇಳ್ದತಾಂ
ಪಂಶೋಭಾನ್ವಿತಲಿಂಗವಿಲ್ಲದಿಹರನ್ನೆಂದೆಂದಿಗಾಸ್ಥಾನದೊಳ್
ಬರಪಂತಪ್ಪಣೆನೀಡಿರೆಂದುನಯದಿಂನಾವ್ಮಾಳ್ಪೆವೈನೇವೆಯಂ
ನಿರುತಂಲಾಲಿಸುಮೌನಿಯಂದುನುಡಿಯಲ್ಕಂದೀಶತಾಂಬಂದನು । ೫

## ವಚನ

ಆಗಳಾದ್ವಾರಪೊಳ್ಕಂದಿಬರವನಾಲೋಕಿಸಿನಾರದಂಕವಟಬು
ದ್ಧಿಯನೆಸಗಿಬಹಿರಂಗದೊಳೆಂದನೆಲೆನಂದೀಶನಿನ್ನಕಳಂ
ಕಾನನಮಂಕಾಣದೆನಿಖಿಲನಿರ್ಜರರೆಲ್ಲರ್ವಿಕಸಿತವದನ
ಮಂತೊರೆದರ್ನಿನ್ನಂ ನೋಡಲಿಂದಿಗೆಮಹಾಶುಭೋದಯ
ವಸಂತಋತುತಲೆದೋರಿತೆಂದುಮುಗುಳ್ನಗೆಯೊಳ್ನುಡಿದುಮತ್ತಿಂತೆಂದಂ । ೭

(ಕಂದಪದ್ಯ)

ಬಾರೈವೃಷಭನೆದೇವಗೆ
ತೋರೈವದನವನುಬೆಂದುಬೇಗುದಿಗೊಂಡಂ
ಧೀರನೆನಿನ್ನನ್ನಗಲುತ
ಗಾರಾಗಿಹುದೀಗದೇವಲೋಕವದೆಂದಂ । ೮

ಬಸವಂಕಿಳಿದಂನಾರದ
ಪುಸಿಯಿಂನಗೆಗ್ಯೆವುನೆಂದುಸಂತಾಪದೆತಾ
ಕಸಿವಿಸಿಗೊಂಡಂಮನದೊಳ
ಗುಸುರಿದ ನಾರದನುಮತ್ತೆಹಾಸ್ಯದನುಡಿಯಂ । ೯

ಎಲೆ ನಂದಿದುರುಳಶಕ್ರನ
ಛಲದಿಂ ಸ್ವರ್ಗವನು ಬಿಟ್ಟುನೀಪೋದುದಕಂ

ಮಲಹರ ವಿದಿಸುರಮೋಣಾ
ಛಲದಂಕರು ತಮ್ಮಮುಖವ ಕುಂದಿರುತಿಹರ್ೖ । ೧೦
ಎನಲಾನಂದಿಯು ನುಡಿದಂ
ಮನದಿಂ ದೀಮಾತುಬಹುದೊಬಹಿರದೊಳಿಹುದೋ
ಘನಮೋದದ ಬಂಧುಗಳ್ಗೆ
ಮನಸುಳ್ಳವರಂತೆ ನಿಮ್ಮಸುಖದೊರಿದಿರಿನೀವ್ । ೧೧

[ಚಂಪಕಮಾಲಾವೃತ್ತ]

ತಿಳಿದೆನು ದೇವಸಂಘಮನ ವೀವರಿಗೆನ್ನನು ನೋಡದಿರ್ದರುಂ
ತಳಿಯುತತೋಷಮುಂ ಪರಮಶೋಭೆಯೊಳಿರ್ಪರು ನಾನುಬಂದುದಂ
ಪಳಿಯಲುಬೇಡ ಮಿಲ್ಲಿಬರುತಿರ್ದನೆ ಶಕ್ರನುಮೋಸದಿಂದಲಿ
ವಿಲಸಿತಲಿಂಗವೊಯ್ದನದ ಕೇಳಲುಬಂದೆನು ಬೇಡಹಾಸ್ಯವು । ೧೨

ಕಂದಪದ್ಯ

ಎನ್ನಯಲಿಂಗವ ಕೊಡಿಸಿರಿ
ಮುನ್ನಮೆನಾಂ ಪೊರಟೆನೀಗಭೂಮಾರ್ಗದೊಳಂ
ಚಿನ್ಮಯ ದೇವನುಕಳವಿನ
ಚಿನ್ಮಯನಂ ಕೊಂಡನೇಕೆಕೇಳುವೆನೆಂದಂ । ೧೩
ಬಸವನವಾಕ್ಯವಕೇಳುತ
ಲಸಮಾಕ್ಷನ ಸಭೆಗೆ ನಿನ್ನಬಿಡ್ಪುವರದಾರ್ಕೆ
ಕುಸುಮಾಸ್ತ್ರನ ವೈರಿಯನೀಂ
ಬೆಸಗೊಳ್ಳುವದೆಂತು ಕಾಣೆನೆಂದಂ ಮುನಿಪಂ । ೧೪
ಕುರುಡಂ ಬಾಯಿಂನುಡಿಯುವ
ಪರಿಯಂದದೆ ಪೇಳ್ದೆನಂದಿಯುಘಟಿತನುಡಿಯಂ
ಮೆರೆವುದೆ ನಿನ್ನಯಸಿರಿತಾಂ
ಪುರಹರ ಸಭೆಯಲ್ಲಿ ಪೇಳ್ವುದೆಂದಂ ಮುನಿಪಂ । ೧೫

## ಮತ್ತೆಭವಿಕ್ರೀಡಿತವೃತ್ತ

ಮುನಿವೇಳಲ್ಬರ ಕೋಪತಾಳಿಬಸವಂ ನಾನೇಕೆಯಾಸ್ಥಾನದೊಳ್
ಧನಪಾಲಾಪ್ತನ ಕಾಣಬಾರದೆನೆ ನೀನಿತ್ತೈಸುರೊದ್ದಾಮಗಂ
ತನುದೊಳ್ತಾಳಿದಲಿಂಗಮಂ ಭವಿಯು ನೀನೆಂದೆನ್ನಲಾನಂದಿತಾಂ
ತನುಲಿಂಗಾರ್ಪಿತ ನೆನ್ನೆನಿಲ್ಲಿಸಿದನ್ನೈ ತಾದ್ವಾರಪಾಲರ್ಕಳಿಂ । ೧೬

## ಉತ್ಪಲಮಾಲಾವೃತ್ತ

ಪೋಗಲುಸಾಹಸಂ ಬಡುವನಂದಿಯುನಿಲ್ಲಿಪರಾಜಯಾದಿಗಳ್
ಬೇಗದಿ ದೇವನೊಳ್ಬರಲುಕೇಳ್ವಿದು ಕೇಳುವದೆಂದನಾಜ್ಞೆಯಂ
ನೀಗಿದೆಲಿಂಗಮಂಬರಲು ಪೇಳ್ವನೆಶಂಕರನಿನ್ನನೆನ್ನಲು
ಭೋಗಿಪಭೂಷರಕ್ಷಿನೆನುತಂ ಘನನಾದದಿನಂದಿಚೀರಿದಂ । ೧೭

ಚೀರಿದನಾದಮಂ ಪರಮದೇವನು ಕೇಳುತಮೇಘಶಬ್ದದಿಂ
ಮೀರಿಮಯೂರ ತೋಷದಳಿದಂತೆಯೆ ಮಾತೆಯನಾದಕೇಳಿತಾ
ಪಾರುತಬಾಲಬರ್ಪತೆರದಿಂ ವರಭಕ್ತನರಕ್ಷೆಗೈಯ್ಯಲಾ
ದ್ವಾರದಮುಂದೆ ಬಂದನದನೇ ನಭಿವರ್ಣಿಪೆ ದೇವಹರ್ಷಮಂ । ೧೮

ಕಡುಬಡವ ಬಳಲುತಳಲುತ
ನಡೆದಾಡುವ ಸಮಯದಲ್ಲಿ ನಿಧಿದೊರಕಿದವೊಲ್
ಸಿಡಿಮಿಡಿಗೊಂಡಿಹರೋಗಿಯು
ಧೃಡವೈದ್ಯನಕಂಡತೆರದಿನಂದಿಯುಕಂಡಂ । ೧೯

ನೋಡುತನಂದಿಯುತಾಮುಂ
ಡಾಡುವಮನದಿಚ್ಛೆಯಿಂದಮುಂದರಿವಾಗಳ್
ಬೇಡ್ಪೈಶಂಕರನಂದಿಯು
ಗಾಢಾಲಿಂಗನವದೆಂದುನಾರದಚೀರ್ದಂ । ೨೦

## ವಚನ

ಬಸವನಾಲಿಂಗನಮಂ ಗೈದುಸಂತಸಮಂಪಡೆಯುಲೆಂಬಗಿರಿಶನಂ
ತಡೆಯಲತ್ಯಂತಕೋಪದಿಂದೆನಗಾಜ್ಞೆಯಂ ಗೈದವರಾರೆಂದೆ
ಡಬಲವನಾರ್ಸೆಯ ಲೀಶನಾನಾರದನಂ ಕಂಡಿಂತೆಂದಂ ೨೧

## (ಮತ್ತೇಭವಿಕ್ರೀಡಿತವೃತ್ತ)

ಎಲೆವಾವಾತ್ಮನೆನಂದಿದೇವನಗಲುತ್ತಾ ತಾಪದಿಂದಿರ್ದೆನ್ನೆ
ಬಲುನಾಂಸಾಹಸಗೈಯಲಿಂದುಮೊಗಮಂತಾತೋರ್ದನೀವಿಘ್ನವಂ
ಖಲಮಾಡಲ್ಬಹುದೇನೊನಂದಿತನುಸಂಪರ್ಕಕ್ಕೆ ಬೇಡೆಂಬುವಾ
ಕಲುಷಂತಾಂತಳೆದಿರ್ಪನೇನುಸುರುನೀನಿಂತೆಂದನಾಶಂಕರಂ । ೨೨

## (ಕಂದಪದ್ಯ)

ಪರಶಿವಕೋಪದೆನುಡಿಯಲು
ನೆರೆಯಿತುಶಿವಸಭೆಯದೆಲ್ಲದ್ವಾರದಪೊರಗಂ
ಜರೆಯುತನಾರದನಿರವಂ
ಸುರರಸುರರುಮನದೆದುಗುಡಗೊಂಡರ್ಬೇಗಂ । ೨೩

ಅಷ್ಟಾವರಣವಿಭೂಷಿತ
ನಿಷ್ಠಂನಂದೀಶದೇವಭಕ್ತಂತಾನುಂ
ಸೃಷ್ಟಿಗೆಪೋದಂತಾಪದೆ
ಮುಟ್ಟಲುತಾವಿಘ್ನವೇನುಶಂಕರಗೆಂದರ್ । ೨೪

## ವಚನ

ಇಂತಾಶಿವಸಭೆಯದೆಲ್ಲಂಗುಜುಗುಜಿಸುತಾನಾರದನಂಜೆ
ಸೆಯುತಿರಲಾಗಜಯವಿಜಯಮುರ್ಮಂದೆಬಂದು । ೨೫

## ಮತ್ತೆಭವಿಕ್ರೀಡಿತವೃತ್ತ

ಜರೆಯಲ್ಕಾರಣವೇನುನೀವುಮುನಿಯಂ ಶ್ರೀಶಂಭುತನ್ನಿಚ್ಛೆಯಿಂ
ಬರೆದಂನೇಮವಲಿಂಗವಿಲ್ಲದಿಹರಂಪಿಂಡೂಡವೇಕ್ಷೈಸ್ತಿತಂ
ಸುರರೋದ್ಧಾವುಗೆತನ್ನಲಿಂಗವನುಸಂದೀಶಂಕ್ರಯಿಂ ಗೊಂಡಿಹಂ
ಪರಮಾತ್ಮಂ ನೆರೆಸಂಗಗೈಯಲಿದುತಾನೌಚಿತ್ಯಮೇನೆಂದರು । ೨೬

## (ಕಂದಪದ್ಯ)

ಜಯವಿಜಯರನುಡಿಗೇಳುತ
ಲಯಕರ್ತನಸಭೆಯಗಣರುಗಾಬರಿಗೊಂಡರ್
ಭಯಗೊಂಡನುಶಂಕರತಾ
ನಯದಿಂಯೋಚಿಸಿದನಾಗತನ್ನಾಪ್ತರೊಳಂ । ೨೭

## (ಉತ್ಪಲಮಾಲಾವೃತ್ತ)

ಎಲ್ಲರಕೇಳಲಾಗಿನಿಜವೆಂದರುಶಿವಸಭೆನಂದಿಲಿಂಗತಾ
ನಿಲ್ಲದಕಾರಣಕ್ಕೆಶಿವಸನ್ನಿಧಿಗೈಯ್ಯಲಯೋಗ್ಯನಾಗಿಹಂ
ಬಲ್ಲಿದರಾದದ್ವಾರಚರವಾಣಿಗೆಮಾರ್ನುಡಿಗಾಣೆವೆನ್ನುತಂ
ಸಲ್ಲಿತುಸರ್ವಚಿತ್ತಕರೆದಂ ಸುರಯೋಗಿಯುಮುಂದೆಶಂಕರಂ । ೨೮

## — ವಚನ —

ಇಂತಾಶಿವಗಣರೆಲ್ಲರೊಂದಾಗಿಪೇಳಲ್ಗಿರಿಜಾಧವನೊಪ್ಪಿ । ೨೯

## (ಚಂಪಕಮಾಲಾವೃತ್ತ)

ನಿಜವೆಲೆಬ್ರಹ್ಮಪುತ್ರ ಬಸವೇಶನು ಲಿಂಗವಿಮುಕ್ತನಾಗೆತಾ
ನಜಹರಿರುದ್ರರಿರ್ಪ ಸಭೆಗೊಳ್ಪಲ ಯೋಗ್ಯನುಮುಂದೆನಂದಿಯಂ
ಸೃಜಿಸುವುದೆಲ್ಲಿ ಪೇಳ್ವುದವನಿಂದಲಿ ಭಕ್ತಿಪ್ರಸಾರಮಾಗುತಾ
ಕುಜನರು ಲಿಂಗನಿಷ್ಠೆಯನು ಪೊಂದಲಿಬೇಗದೊಳೆಂದಶಂಕರಂ । ೩೦

(ಕಂದಪದ್ಯ)

ಭೋಗಿಪಭೂಷಂ ನುಡಿಯಲ್
ಬಾಗಿದ ಪಾದಕ್ಕೆ ಬೇಗನಾರದಯೋಗೀ
ಸಾಗಿಸುದೇವನೆ ಭೂಮಿಗೆ
ನೀಗಿಸುಭೂಜನದ ತಾಪಮಂದಯದಿಂದಂ । ೩೧

ಮಾದರಸಮಾದಲಾಂಬಿಕೆ
ಮೇದಿನಿಯೊಳ್ಭಕ್ತಿ ಜೀವಿಯಾಗಿರೆ ತಾಮು
ತ್ತಾದರಿಪರ್ಮುನಿಕುಲಮಂ
ಬಾಧೆಯು ತಾಳ್ವಿಹರುಪುತ್ರರೊಂದಿಲ್ಲದಕಂ । ೩೨

ಆಮಹಿಮರುದರದಲಿನೀ
ನೀಮಹಿಮಾಕರದ ಬಸವದೇವನನಿಕ್ಕಲ್
ತಾಮಹಿಮೋದವಪೊಂದ್ವದು
ತಾಮಸ ಪೋಡುವದು ಸತ್ಯವೆಂಪಮುನೀಂಪ್ರಂ । ೩೩

ಮೊದಲಿಗೆ ಶಿಲೆಯಂ ತಿನ್ನುವ
ಪದಮುಲಯೋಗೀಂದ್ರ ನೊಡಲಿಗಿಟ್ಟಂತೀಗಳ್
ಮುದದಿಂದ ನಂದಿಯನ್ನಿಡು
ಮದನಾರಿಯೆಬೇಡ ಮನದೊಳನ್ಯವಿಚಾರಂ । ೩೪

ವಸುಧಿಗೆಪುಟ್ಟಲುಬಸವಂ
ಪಶುಪತಿ ಧರ್ಮವನು ಬೆಳಿಸಿಕುಜನರನಳಿಸಿ
ಹಸನಾದ ಲಿಂಗಮಹಿಮೆಯು
ಸುಸುರಲಿ ತಾನನ್ಯಗಣಕದೆಂದಂ ಮುನಿಪಂ । ೩೫

## ವಚನ

ಆಗಳಾಶಂಕರಂ ನಿರುಪಾಯನಾಗಿ ಜೀರ್ಣೋದ್ಧಾರಕಂ ಶಂಭು ರೂಪಂಬಸವರಸನಲ್ಲದೆಪರರಿಂದಾಗದೆಂದುನಿಶ್ಚಯಿಸಿಬಸವನಂಕರೆಯುತಂ

ಎನೆನಂದೀಶನ ಶಂಕರಂಕರೆದಯಶಾಃ ಚಾರ್ಯೆದಯಾಪೂರ್ಣನೇ
ಮನದೊಳ್ಚಿಂತಿಸಬೇಡ ಪೋಗುಧರೆಯೊಳ್ನೀಜನ್ಮತಾಳ್ದೆ ಮಹ
ತ್ತ್ರನುವಿಂದಿಷ್ಟಸುಲಿಂಗದಾಳ್ದುಗುರುವಂ ಸದ್ಭಕ್ತಿಯಿಂ ನೇಸೆಗೈ
ಘನಬ್ರಹ್ಮತ್ವವಪೊಂದಿಜೀವಶಿವರನ್ನೊಂದಾಗಿಮಾಡೆಂದನು ! ೩೭

## ಕಂದಪದ್ಯ

ಬಸವನೆಲಿಂಗವನಲಿದ
ಕಸಿವಿಸಿಯಿಂ ತಾಪಗೊಂಡು ಒಳಲಲುಬೇಡೈ
ಎನೆವಿಷ್ಟಲಿಂಗವನುನಾಂ
ಭಸಿತನಪೂಸುತಲಿ ಧರಿಪೆಂನ್ನುರದೊಳಗಂ । ೩೮

ಕುಂದಿದಶಿವಸದ್ಭಕ್ತಿಯ
ಚೆಂದದಿ ಯರಳಿಸಲು ನೀನದಲ್ಲದೆ ಮತ್ತಾ
ರೆಂದುಂ ಪೇಳಿದಶಂಕರ
ದಂದುಗಬಡೆಯುತ್ತ ಬಿದ್ದನಾನಂದೀಶಂ । ೩೯

## (ಚಂಪಕಮಾಲಾವೃತ್ತ)

ಪರಮನ ವಾಕ್ಯಕೇಳಿ ಘನತಾಪದೆನಂದಿಯು ಘೋರಮಾರುತಂ
ಭರದೊಳು ಬೀಸೆಬಾಳೆಮುರಿದುಂತುರೆ ಬೀಳುತದೇಹವಿಭ್ರಮಾ
ತ್ವರಿತದಿ ಕೊಳ್ಳೆದೇವಶಿವನೆಂದನು ಭೂಮಿಯೊಳಿಂತು ಜೀವಿಪೆಂ
ಸ್ಮರಿಸಲಶ್ಯಕಮಾತ್ರ ಜಠರಾಗ್ನಿಯತಾಳುತಲೆಂತು ವಾಸಿಪೇಂ । ೪೦

## ಕಂದಪದ್ಯ

ತೊರೆದನೆಶಂ ಕರದಯನಂ
ಮುರಿದನೆ ತನ್ನಾಶೆಧರೆಗಪನ್ನಂಬೇಗಂ
ಕರೆದನೆನಾರದಹರಹರ
ಘರಿದನೆ ತನ್ನಂತರಂಗವಲ್ಲಿಯಕೆಂನರಂ । ೪೧

ವಿಂಶತಿ ದಿನದೊಳ್ಮಾಘನ
ಮಾಂಸದ ರೂಪದಲಿಮುಂದೆ ಬೆಳೆಬೆಳೆಯುತಮೇಣ್
ತ್ರಿಂಶದ್ದಿನ ದೊಳ್ಪಂಚಕ
ಸಂಶಯಭಾಗವದು ತೋರ್ಪುದೆನ್ನೀಘಟಕೆ ! ೫೩

ಮೂರನೆಯ ಮಾಸದೊಳುತಾ
ತೋರುವದೈ ಶಿರವುಮುಂದೆನಾಲ್ಕಕ್ಕಂತಾಂ
ಮೀರಲುಕೈಕಾಲುಗಳಾ
ಕಾರಮದಾಗುತ್ತಲಿರ್ಪನಸುವೆನಗಿಲ್ಲೈ || ೫೪

ಪಂಚಮಕೆ ಜೀವಪುಟ್ಟಲು
ಮಿಂಚುವತಿಂಗಳಿಗೆ ಸಪ್ತಧಾತುಗಳುದಯಂ
ವಂಚನೆಯಿಲ್ಲದಲೇಳಕೆ
ಸಂಚಿತವಾಗುವವು ಸರ್ವಕರಣಗಳಿನಗಂ । ೫೫

ಎಂಟಕೆಮುನ್ನಿನಜ್ಞಾನಂ
ಟಿಂಟಿಣಿಸುವದಕಟ ತಾಯಿಗರ್ಭಾಂತರದೊಳ್
ಉಂಟಾಗುವದದುತಾಪಂ
ಎಂಟಡಿವರಿಜೇಶತಾತಸೈರಿಸಲೆಂತೈ ! ೫೬

ಅಲುಗಾಡಲ್ಬರಲಾರದೆ
ಬಲುಮುದ್ದಿಯದಾಗುತ ಭಯತೊಡೆಗಳನಡುವಾಂ
ನಲುಗಿದಶಿರವನ್ನಿಕ್ಕುತ
ಮಲಮೂತ್ರದೆ ಬಿದ್ದುಬಾಳಲೆಂ ತಕಟಕಟಾ । ೫೭

ಪಸಿವಾಗಲುಗರ್ಭದೊಳಾ
ಪಸಿಮಾಂಸದ ಶೇಷತಿನ್ನಲಾಯಿತೆದೇವಾ
ಮಿಸುಕಲ್ಕ್ರಿಮಿಕೀಟಕಗಳ್
ಘಸಸಣಿಯ ಸೈರಿಸುತಲೆಂತು ಗರ್ಭದೊಳಿಹೆನ್ನೈ । ೫೮

## ವಚನ

ಇಂತಾನಂದೀಶಂ ಮನದೆಮರುಗಿ ಭೂಮಿಯೊಳ್‌ಜನ್ಮಮಂ ತಾಳ
ಲಿಂತುನಾಂಕರ್ಕಶದುರಿಯಂ ಸಹಿಪೆನೆಂತಲ್ಲದೆ || ೫೯

### ಮತ್ತೆಭವಿಕ್ರೀಡಿತವೃತ್ತ

ಇದುತಾನಿಂತಿರೆ ಗರ್ಭದಲ್ಲಿ ನವಮಾಸಂ ಪೂರ್ಣಮಾಗಲ್ಕೆತಾ
ನೊದಗುತ್ತಂ ಸುಪ್ರಸೂತವಾಯು ಪೊಡೆಯುತ್ತಾ ತಾಪಮಂತೋರ್ಪುದೈ
ಅದನೇಂಪೇಳಲಿಬೀಳ್ವ ಘೋರಸಿಡಿಲಂಝಂಝಾನಿಲಂವೇಗದಿಂ
ಪೊಡೆಯಲ್ತಾಳ್ವುದುಲೇಸುಸೈಸೆನದನಾನೆಂತೆಂದನಾನಂದಿಯು || ೬೦

### ಕಂದಪದ್ಯ

ಕಷ್ಟಂಬಾಲನಜನ್ಮಂ
ಕಷ್ಟಂತಾಯೊಲ್ಮೆಯರಸಿಕೆಯಂಪೀರ್ವುದುಮೇಣ್
ಕಷ್ಟಂಯೌವನಬಾಳುವೆ
ಕಷ್ಟಂವೃದ್ಧಾಪ್ಯದಿರವದೊಟ್ಟುಗೆಕಷ್ಟಂ | ೬೧
ಕಸ್ತೂರಿಮಾರುವವನೊಳ್
ಕುಸ್ತಿಯಪಿಡಿಯುವದುಲೇಸದಿದ್ದಲಿಯವನಿಂ
ಹಸ್ತದಿಸೈಯನಿಪುದುತಾ
ನುತ್ತುಮವಲ್ಲೆಂಬತೆರದೆಶಕ್ರನಕಲಹಂ | ೬೨
ಜೇನಿನಲಿಸಿಕ್ಕಮಕ್ಷಕ
ತಾನದುವೊದ್ದಾಡಿಕಷ್ಟಗೊಳ್ಳುವತೆರದಿಂ
ಹೀನಭೂಜನ್ಮದೊಳುನಾ
ನೇನೆಂತಿರಲಕಟನನಗೆ ದುರ್ವಿಧಿಬಂತೇ | ೬೩
ಅಟ್ಟಿಗೆಯೊಳಗಿಹದೊಂದೆಲೆ
ಕೆಟ್ಟರೆತಾಪೂರ್ಣನಾಶಗೈಯುವತೆರೆದೊಳ್ |

ಸೃಷ್ಟಿಯೊಳುದುಷ್ಟನೊಬ್ಬನು
ಶಿಷ್ಟರನೆಲ್ಲಕೆನುಕೆಡಿವನೇಂಗತಿಯೆನಗಂ । ೬೪

[ಚಂಪಕಮಾಲಾವೃತ್ತ]

ಧರೆಯೊಳುಮೀರಿನಾನಡೆಯಲುದ್ಧಟನೆಂಬರುಬಾಗಿಬಾಳಲುಂ
ಕಿರುಕುಳನೆಂದುಕೀಳುನುಡಿವರ್ಬಹುಭಾಷಿತನಾಗಲೆನ್ನನುಂ
ಇರದತಿಬಾಷೆಯುಂ ಬರುಸುವವೌನದೊಳಿದ್ದರೆಮೂಕನೆಂಬರು
ಪರವಧುವಂನಿರೀಕ್ಷಿಸಲುಜಾರನದಂಬಿಡೆಷಂಢನೆಂಬರೈ । ೬೫

(ಕಂದಪದ್ಯ)

ಕಾಮನಕಾಟಂತನುವಿಗೆ
ಭೂಮಿಯಜನತಾಪಬರ್ಪರುಜೆಗಳಕಾಟಂ
ಕಾಮಿತವಸ್ತುಗಳಗಲಿಕೆ
ನೇಮದಿಬರುತಿಹವದೆನಗೆ ಭೂಜನ್ಮದೊಳಂ । ೬೬

ಚಂಪಕಮಾಲಾವೃತ್ತ

ಭವವೆನಿಪಬ್ಧಿಯಲ್ಲಿಯರಿವರ್ಗಗಳೆಂಬುವಭಂಗಬರ್ಪವೈ
ತವಕದಿನನ್ನದೆಂಬಮಮಕಾರವುಹೊಯ್ಸುದುವಾಯುರೂಪದಿಂ
ದಿವದಿವಸಂಕಠೋರತನದಿರ್ಪಕುತಾಪಗಳೆಂಬನಕ್ರಗಳ್
ಜವದೊಳುನುಂಗಲೆಂದಿಹವುದೇಹದನಾಕೆಯನೆಂತುದಾಟಿಪೆಂ । ೬೭

## ವಚನ

ಇಂತುಪಲಬಗೆಯಿಂದಳ್ಕುತಂ ನಂದಿಯಾಗಿರಿಜೇಶನಾಜ್ಞೆಗೆ
ಮಾರುತ್ತರಂಗೊಡದಿರಲ್ಭೂತೇಶನೆಳಪಸುಳಿಯುಂ ಸಂತೈ
ಪಮಾತೆಯವೊಲ್ಸಂತೈಸುತವನನಗಲಿತಾನಿರಲಾರದಿರ್ದೊಡಂ
ಸಂಚಿತಮಂಮೀರಲಾಗದೆಂದುಸುರಿದಂ । ೬೮

(ಕಂದಪದ್ಯ)

ಬಳಲಲುಬೇಡೈನಂದಿಯು
ಕಳಿಸಲುಭೂಲೋಕದಲ್ಲಿನಿನ್ನಯದೇಹಂ
ಬೆಳಗುವದುತೇಜದಿಂದಂ
ತಳಮಳಗೊಂಡಳುಕಬೇಡನಿನ್ನಯಮನದೊಳ್ । ೭೯

ಲಿಂಗವನಗಲಿದದೇಹಕೆ
ಮಂಗಲವೆಲ್ಲಿಹುದುಪೋಗುಧರೆಯೊಳ್ಪುಟ್ಟೈ
ಭಂಗವಮನದಿಡದಲೆನೀ
ನಿಂಗಿತವರಿನಾನುಲಿಂಗ ವಿಕ್ಕುವೆನೆಂದಂ । ೭೦

ವ। ಎನಲಾನಂದೀಶಂಶಂಕರಂಗೆ ಬಿನ್ನಪಗೈದಂ । ೭೧

ಎಲೆದೇವಯೋನಿಮುಖದೊಳ್
ಕಳುಹಿಸೆಮನಮೆಂತುನಿನಗೆ ಮೋದಿಸಿಕಟಾ
ಕಲುಷರಸಂಗದೊಳೆನ್ನಂ
ಬಲುನೀಂ ಸಾಹಸದೆದೂಡಲೇಂ ಪಾಪವಿದ್ದೈ । ೧೨

ಭವದೊಳ್ಪುಟ್ಟಲ್ಕೆನಗಾ
ಭವಸಾಗರ ಪಾರುಗೈವಬೋಧೆಯನಾರುಂ
ತವಕದೆ ಬೋಧಿಪರೆಕಟಾ
ದಿವದೊಳ್ನಾನಿಲ್ಲಲಿಕ್ಕೆ ನೆರಳಿಲ್ಲಾಯ್ತೆ ॥ ೭೩

ಬೇಡಿದಕೊಡುವರದಾರ್ರೈ
ರೂಢಿಯೊಳೆನಗಿಷ್ಟಲಿಂಗವಿಕ್ಕುವರಾರ್ರೈ
ಕೂಡಿಪಮಿತ್ರರದಾರ್ರೈ
ಪಾಢನೆ ಪೇಳೆನಗೆ ದೇವನೆಂದೆರಗಿದತಾಂ । ೭೪

ಎರಗಲ್ಕಂದಿಯನೀಶಂ
ಭರದಿಂಮನ್ನಿಸುತ ಪೇಳ್ದನಂತರಮೆಲ್ಲಂ
ಪರಶಿವರೂಪನೆನಿನ್ನಂ
ತ್ವರದಿಂದಿಕ್ಕುವೆನೆಯೋನಿ ಮುಖದೊಳಗಾನುಂ । ೭೫

**ಮತ್ತೇಭವಿಕ್ರೀಡಿತವೃತ್ತ**

ವೃಷಭಂ ತಾಪ್ರತಿಶಂಭುವೆಂದುನಿರುತಂ ಕಾಲಾರಿಯುಂತೆಂದುತಾ
ನುಸುರುತ್ತಿರ್ಪುದುವೇದಯೋನಿಮುಖದೊಳ್ನೀಪುಟ್ಟಲೌಚಿತ್ಯವೇ
ಎಸೆವಷ್ಟಾವರಣಂಗಳಿಂ ಭರಿತಮಾದೀನಿನ್ನ ಸತ್ಕಾಯಮಂ
ಪೊಸದೊಂದಂ ನೆರೆಗೈದಯೋನಿಜನುನೀನೆಂಬಂತೆನಾಂಕಳ್ಪುವೆಂ । ೭೬

ಧರಿಪೆಂ ನಾನಿನಗಿಷ್ಟಲಿಂಗವನು ನೀಭೂಜನ್ಮದೊಳ್ಪಾಳಲು
ನಿರುತಂ ತೋರುವೆ ಪಂಚಸತ್ಪುರುಷಮಂ ನಾನೀಸು ಕೈಲಾಸದೊಳ್
ಇರುತಿರ್ಪಾಘನರುದ್ರಸಂಚಯಮವಸನ್ಮಿತ್ರಾಪ್ತರಂ ಮಾಡುವೆಂ
ಭರದಿಂಪೋಗೆಲೊನಂದಿಬೇಡರುದಿತಂ ಕೇಳೆಂದನಾಶಂಕರಂ । ೭೭

**(ಕಂದಪದ್ಯ)**

ಎಲೆವೃಷಭನಿನ್ನಲಿಂಗದ
ನೆಲೆಯನ್ನರಿಯಲ್ಕೆಭೂಮಿಜನ್ಮದೆಬೇಗಂ
ಕಳೆಹುವೆನಾಂಜಯವಿಜಯರ
ಸಲೆಬಿಜ್ಜಳನಾಮದಿಂದಕೇಳೆಲೆನಂದೀ । ೭೮

ದ್ವಾರದೆನಿನ್ನಂತಡೆದಿಹ
ನಾರದಯೋಗೀಶಕೊಂಡೆಮಂಚಣ್ಣಿತಾ
ಪೂರಿತನಾಮದೆಪುಟ್ಟುವ
ತೋರಿಸುಕಲ್ಯಾಣದಲ್ಲಿಮಹಿಮೆಯನವರೊಳ್ । ೭೯

**(ಚಂಪಕಮಾಲಾವೃತ್ತ)**

ಬರುವನುವೀರಭದ್ರಮಡಿವಾಳನನಾಮದಿವಿಘ್ನನಾಯಕಂ
ಬರುವನುಹಂಪನೆಂಬುವಭಿಧಾನದೆಭೂಮಿಗೆವೀರಷಣ್ಮುಖಂ

ಬರುವನುಚೆನ್ನದೇವನೆನಿಸುತ್ತಲಿಷಟ್ಸ್ಥಲಶೋಭೆಯಿಂದಲಿ
ಬರುವನುದೇವನಲ್ಲಮನುಬೋಧೆಯನಿಕ್ಕಲುನಿನ್ನತಾಣಕಂ । ೮೦

ಬರುವಳುಗೌರಿನಾಗಲೆಯನಾಮದೆನಿನ್ನಯಸೋದರತ್ವದೊಳ್
ಬರುವಳುವಾರಿಗಂಗೆಯಭಿದಾನದೆನಿನ್ನಯಪತ್ನಿಯಾಗಲುಂ
ಬರುವಳುವಾಣಿತನ್ನಪರಿವಾರವಗೂಡುತನಿನ್ನಸೇವೆಯೊಳ್
ಬರುವಳುನೀಲಲೋಚನೆಯನಾಮದೆಶಾಂಬರಿಮಾಯೆಭೂಮಿಗೆ । ೮೧

(ಕಂದಪದ್ಯ)

ಪಲಮಾತುಗಳೇ ಕೈನೀ
ನೆಲದೊಳ್ಪುಟ್ಟಲ್ಕದೆನ್ನಸಭೆಯೊಳಗಿರುವಾ
ಮಲಹರಶರಣರನೆಲ್ಲಂ
ಬಲುರೂಪದೆ ಕಳಿಸಿಕೊಡುವೆ ಕೇಳಲೆನಂದಿ ೮೨

ಅಂತಹಶಿವಶರಣರನೀಂ
ಸಂತನದಿಂ ಸೇವೆಗೈದುಷಟ್ಸ್ಥಲದರಿವಿಂ
ನೀಂತಳೆದಿಹಭೂಜನ್ಮವ
ಕಂತುಪನಾರಾತಿಯಲ್ಲಿಕೂಡಿಪುದರಿನೀಂ । ೮೩

## ವಚನ

ಇಂತೆಂದುಪಿನಾಕಿನಂದಿಯಂಸಂತಸಗೊಳಿಸುತಾಲ್ಪರಿದುಮುಂಗೊಂಡು ಬಲವ್ಮಾಗಿ ಪೋಗಲೊಡಂಬಡಿಸಿದಂ ನಂದಿಕೇಶನಾಗಭೂಲೋಕಪೊಳ್ತಾ ಬಾಳ್ವಪರಿಯನೊಂದೊಂದಂ ಕೇಳೆಲನುವಾದಂ । ೮೪

## ಗದ್ಯ

ಇದು ಶ್ರೀಮದ್ವೀರ ಶೈವಾಚಾರ್ಯ ರೀಣಶಾಂತವೀರ ದೇವರೊಡ ಲಬುದಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾಕಾವ್ಯದೊಳ್ಪ್ರಾವದಶಾಶ್ವಾಸಂ ಸಮಾಪ್ತಂ ಅಂತೂಸಂಧಿ ಹನ್ನೆರಡಕ್ಕಂ ಗದ್ಯಪದ್ಯಂಗಳು ಒಂಭತ್ತುನೂರಾ ಐವತ್ತಕ್ಕಂ ಮಂಗಲಮಹಾ.

# ತ್ರಯೋದಶಾಶ್ವಾಸ ಪ್ರಾರಂಭ.

(ಚಂಪಕಮಾಲಾವೃತ್ತ)

ಹರಿಜಕಪಾಲಪಾತ್ರ ಹರಿಮಿತ್ರ ಹರಿತ್ರಯಶೋಭನೇತ್ರನೇ
ಹರಿಧರಗಾತ್ರ ಸಂಹರಿಪಘತ್ರಯ ಬಾಧಲತಾಲವಿತ್ರನೇ
ಹರಿತನುಜಾತಗಾತ್ರವಹನೇತ್ರನು ತಾನತಚೂತಚೈತ್ರನೇ
ಹರಿಬವಿಚಿತ್ರನೇ ಹರಿಸುಪಾಶವ ಘೋರಭವಾಬ್ಧಿ ಛೈತ್ರನೇ । ೧

ತ್ರಿಗುಣವಗಲ್ದನೇ ತ್ರಿಮಲನಾಶನೇ ನೀತ್ರಿದಶೌಘಪಾಲನೇ
ತ್ರಿಗಣರೊಳೊರ್ವನೇ ತ್ರಿಪುಟಸಂಗನೆ ನೀತ್ರಿದಳಾರ್ಚಿತಾಂಗನೇ
ತ್ರಿಘಟವಮೀರ್ದನೇ ತ್ರಿಜಗಪಾಲನೆ ನೀತ್ರಿಪುರಂಗಳಳ್ದನೇ
ತ್ರಿಗರಳಕಾಯಮಂ ತರಿದುರಕ್ಷಿಪುದೆನ್ನತ್ರಿಶೂಲಧಾರಕಾ । ೨

[ಶಾರ್ದೂಲವಿಕ್ರೀಡಿತವೃತ್ತ]

ಪೋಪೆಂದೇವನೆ ತಮ್ಮವಾಕ್ಯಬಲದಿಂ ನಾಭೂಮಿಯೊಳ್ಪುಟ್ಟುವೆಂ
ತಾಪಂನಾಶವಗೈವಭಾರವದು ನಿನ್ನಂಕೂಡಿತ್ತೈ ಶಂಕರಾ
ಶ್ರೀಪಂ ವಾಣಿಯನಾಥರೆಲ್ಲರಿಗೆ ತಾಮೀರಿರ್ದಷಡ್ಲಕ್ಷಣಾ
ಲಾಪಂ ಬೋಧಿಸುನಿರ್ಗುಣಾಢ್ಯದಿರವಂ ನೀನೆಂದನಾನಂದಿಯು । ೩

## ವಚನ

ಇಂತಾನಂದೀಶಂ ಬಿನ್ನಪಮಂಗೈಯಲ್ । ೪

(ಕಂದಪದ್ಯ)

ಕೇಳೆಲೆಸಿದ್ಧನೆಬಸವಂ
ತಾಳುತ ಬಹುಭಯವಮನದಿಕೇಳೆಲ್ ಶಿವತಾ
ನಾಳುತ ನೋಡದೆಪೇಳ್ದಂ
ಭಾಳಾಕ್ಷನೊಳೊಂದುಗೈವಕಾಯದತೆರಮಂ । ೫

ಪೇಳುವೆಕೇಳ್ಳೆನಂದಿಯ
ತಾಳಿಲಿನಿಶ್ಚಯುವಮನದೆಷಟ್ಸ್ಥಲಮಾರ್ಗಂ
ಪೇಳಲ್ಕಸದಳಮಿಹುದಿದು
ಮೇಳೈಪುದುತಾನೆಜಗದೆಜೀವೇಶ್ವರರಂ । ೬

(ಮತ್ತೇಭವಿಕ್ರೀಡಿತವೃತ್ತ)

ಎಲೆನಂದೀಶನೆ ಕೇಳುಷಟ್ಸ್ಥಲದಮಾರ್ಗಂತಾಮಹಾಲಿಂಗದಾ
ನೆಲೆಯಾಗಿರ್ಪುದನಂತನವ್ಯಯನಿರಾಭಾರಂ ನಿರಾಲಂಬನಿ
ಷ್ಕಲಸಚ್ಚಿತ್ಪುರುಷಾತ್ಮಕಂನಿರಘನುಂ ಮೇಣತ್ಯತಿಷ್ಠದ್ದಶಾಂ
ಗುಲತಾಂ ಸುಸ್ಥಲಗೊಂಡುತೋರಲದಕಂ ಸದ್ಬ್ರಹ್ಮವೆಂದೆಂಬರೈ ೭

(ಚಂಪಕಮಾಲಾವೃತ್ತ)

ಎಸೆಯುವದೇವ ತನ್ನೊಳಗ ದೈಕ್ಯತೆಗೊಂಡಿಹಚಿತ್ತಶಕ್ತಿಸಂ
ತಸದೊಳು ಸೇವ್ಯಸೇವಕನಭೇದದಿಲಿಂಗಮುದಂಗಮಾಯಿತೈ
ಮಿಸುಪಸುಲಿಂಗಸೇವ್ಯ ಮಹದಂಗವೆಸೇವಕದ್ವಂದ್ವಗೂಡುತಾ
ಪೊಸಪರವಸ್ತುವಾಯ್ತುದಕೆ ಲಿಂಗತಲಾಂಗತಲಂಗಳಾದವೈ ॥ ೮

ಪರತರಲಿಂಗತತ್ವಮಹದಂಗದ ತತ್ವಶಿವತ್ವದಿಂದಲಿ
ಪರಪರಮಾತ್ಮತತ್ವದಲಿಭೇದದಿ ತಾಪರಿಯಾಯಗೊಳ್ಳುತಂ
ಪರಮಶಿವತ್ವದಿಂದು ಭಯಮಾಗುತ ಸುಸ್ಥಲತೋರಲಾಗಲಾ
ಪರಿಯೊಳು ಶಕ್ತಿತಾನು ಭಯಮಾಯ್ತಲೆ ನಂದಿಯೆಕೇಳುಬೇಗದಿಂ

(ಕಂದಪದ್ಯ)

ಎರಡಾದಶಕ್ತಿಬಗೆಯುರಿ
ಪರುಷಾನ್ವಿತ ಹಸ್ತಮುಳ್ಳನಂದೀಶನೆನೀಂ
ಪರಶಿವಸಮಾನ ಧರ್ಮದೆ
ಪರಲಿಂಗಾಂಗಗಳು ನಿಜನಿವಾಸದೆತೋರ್ಕುಂ । ೧೪

ಲಿಂಗದಶಕ್ತಿಯೆಸರತಾ
ನಂಗದ ಘನಶಕ್ತಿ ಭಕ್ತಿಯೆನಿಪುದುತಿಳಿನೀಂ
ನಿಂಗಳನುರಿಯಿಂ ಕಿಡಿಯಿಗ
ವಿಂಗಡಿಸುವ ತೆರದೆಚಿತ್ತುತಾನೆರಡಾಯ್ತು ।೧೧

## ಚಂಪಕಮಾಲಾವೃತ್ತ

ಅನಲಸಧೂಮ ತೇಜವನು ಬೀರದವೋಲದುವಾಸನತ್ವದಾ
ಘನತೆಯನಾಂತು ಶಕ್ತಿಯುರೆಕಾಂಬುದುದೀಪವು ಜೋತಿಬೀರ್ವವೊಲ್
ದಿನಮಣಿತೇಜದಂತಿಹುದು ಭಕ್ತಿಯುತಾಂ ನಿರ್ವಾಸನತ್ವದಿಂ
ಮನವಿಡಿನಂದಿಶಕ್ತಿಗುರೆ ಭಕ್ತಿಯುಮೇಲೆನಿಪಾಗಿರೆಂಜಿಕುಂ । ೧೨

## (ಕಂದಪದ್ಯ)

ಶಕ್ತಿಯಭಕ್ತಿಯ ಭೇದವ
ಯುಕ್ತಾಯುಕ್ತವನು ಕೇಳುನಂದೀಶನೆನೀಂ
ಶಕ್ತಿಪ್ರವೃತ್ತಿಯಮಾರ್ಗಂ
ಭಕ್ತಿಯೆನಿವೃತ್ತಿಮಾರ್ಗವೆನಿಪುದುತಾನು ॥ ೧೩

## ಮತ್ತೇಭವಿಕ್ರೀಡಿತವೃತ್ತ

ಅರೆಯೈನಂದಿಯೆ ಶಕ್ತಿಮಾಯೆಯಿಹುದೈ ಮಾಯರಿಯಾಗಿರ್ಪುದಾ
ಪರಸದ್ಭಕ್ತಿಯು ಶಕ್ತಿಪುಣ್ಯಫಲದಂ ಮುಕ್ತಿಪ್ರದಂ ಭಕ್ತಿಯು
ವರೆಶಕ್ತಿತ್ವವಧೋಮುಖಂ ತಿಳಿಯೊನೀ ಭಕ್ತಿತ್ವಮೂರ್ಧ್ವಂಮುಖ
ಮೆರೆಯುತ್ತೀಪರಿತೋರ್ಪುದೈ ವೃಷಭಕೇಳೀ ಶಕ್ತಿಭಕ್ತಿತ್ವವು । ೧೪

## ಉತ್ಪಲಮಾಲಾವೃತ್ತ

ಲಿಂಗದಶಕ್ತಿತಾಶಿವನುಭಕ್ತಿಯೆದಂಗದೆಜೀವನಾಗುತಂ
ಲಿಂಗಮುದಂಗಸಂಗದಲಿತೋರ್ಪಶಿವೈಕ್ಯವುತಾನೆಯಾಶಿವಂ
ಪಿಂಗದೆನೋಡೆಮೂರುತೆರನಾದನುವೇದಸುಮಂತ್ರಸತ್ಕ್ರಿಯಾ
ಸಂಗಳಿಸುತ್ತನಾದಕಳೆಬಿಂದುಗಳಿಂ ಘನಲಿಂಗಕೇಳಿಲೈ । ೧೫

ನಾದದಿಭಾವಲಿಂಗವರಬಿಂದುವಿನಿಂದಸುಲಿಂಗಸತ್ಕಳಾ
ಭೇದದೊಳಿಷ್ಟಲಿಂಗಮದುಭಾವವೆನಿಷ್ಕಲಪ್ರಾಣಲಿಂಗತಾ
ಪೋದದೆಕೇಳುನೀಸಕಲಮಿಷ್ಟವುತಾವಿಮಲಾಖ್ಯಮಾಗಿತ್ರೈ
ಭೇದದೆಕಾಣುತಿರ್ಪವಿದರಂದವಿದ್ಯೆತಿಳಿನೀಂಪಮೂಲಮಂ । ೧೬

(ಚಂಪಕಮಾಲಾವೃತ್ತ)

ತಿಳಿಯಲುಸತ್ಯರೂಪಮದುಭಾವವುಚಿತ್ತವೆಪ್ರಾಣಲಿಂಗವೈ
ಹೊಳೆವುದುಕಣ್ಗೆತಾಬೆಳಗಿಸಂತಸವಿಷ್ಟಸುಲಿಂಗಕೇಳೆಲೈ
ನಲಿವಸಿವಾಕ್ಯಭಾವವದುತ್ವಂಪದಪ್ರಾಣವುತತ್ತುವಾಕ್ಯನಿ
ಶ್ಚಲಮೆನಿಪಿಷ್ಟಲಿಂಗಮಿವುತತ್ವಮಸೀಘನವಾಕ್ಯವಾಯಿತೈ । ೧೭
ಎಸೆವಶಿವತ್ವವೇಯಹುದುಭಾವವುಸೂಕ್ಷ್ಮದಸರ್ವತತ್ವತಾ
ನೆಸೆವಸುಲಿಂಗಸ್ಥೂಲದೆಸಕಂಘನದಿಷ್ಟಸುಲಿಂಗಮಿರ್ಪುದೈ
ಪಸರಿಪಸೂಕ್ಷ್ಮತತ್ವವದುತಾನೊಳಗೆನ್ನಿಸಿಸ್ಥೂಲತತ್ವತಾ
ಹಸನದೆಕಾಂಬುದೈಹೊರಗೆತಾಪರತತ್ವವಖಂಡಮಪ್ಪುದೈ । ೧೮

ಕಂದಪದ್ಯ

ಇಂತಪ್ಪತೆರದೆಲಿಂಗವು
ಸಂತಸದಿಂಮೂರುತಾನೆಯಾರಾಗಿಹುದೈ
ಭ್ರಾಂತಿಯನಳಿಯುತಲಾಲಿಸು
ಕಂತುವಿನಾರಾತಿರೂಪನೆಂದಂಗಿರಿಶಂ । ೧೯

— ವಚನ —

ಇಂತುಮೂರುಲಿಂಗಗಳಖಂಡಿತದಿಂದಾರಾಗೆ । ೨೦

ಮತ್ತೆಭವಿಕ್ರೀಡಿತವೃತ್ತ

ತಿಳಿಯಲ್ಭಾವದಲಿಂಗವೇವರಮಹಾಲಿಂಗಂಪ್ರಸಾದಾಖ್ಯವು
ಚಲಿತಾಪ್ರಾಣದಲಿಂಗತಾಚರಸುಲಿಂಗಂಶೈವಲಿಂಗಾಖ್ಯನೈ

ಬಲವಮಾಡಿಷ್ಟಸುಲಿಂಗತಾನುಗುರುಲಿಂಗಾಚಾರಲಿಂಗಾಖ್ಯದಿಂ
ತಿಳಿಯಲ್ಭೇದವುದಾರುಲಿಂಗದಲಿತಾನಾಶಕ್ತಿಯಾರಾದವೈ । ೨೧

## ಚಂಪಕಮಾಲಾವೃತ್ತ

ನಲಿಯುವಶಾಂತಿಯುತ್ತರವನಿಪ್ಪಸುಸತ್ಕಳೆಚಿತ್ತಶಕ್ತಿತಾ
ವ್ರೊಳೆಯುವಶಾಂತ್ಯತೀತಕಳೆತಾಪರಶಕ್ತಿಯುಶಾಂತಿಸತ್ಕಳೆ
ಮಲರಹಿತಾದಿಶಕ್ತಿಯದುವಿಟ್ಟೆಯಶಕ್ತಿಯುವಿದ್ಯದಿಂದತಾ
ತಿಳಿಯಲುಜ್ಞಾನಶಕ್ತಿಯುಪತಿಷ್ಠವುನಿವೃತಿಸತ್ಕಳಾಕ್ರಿಯಂ । ೨೨

## ಕಂದಪದ್ಯ

ಈಪರಿಷಡ್ವಿಧಶಕ್ತಿಯು
ವ್ಯಾಪಿತವಾಗಿಹುದುಕೇಳುಲಿಂಗಗಳೊಳಗಂ
ಭೂಪನೆಲಾಲಿಸುಕರಣವ
ವ್ಯಾಪಿಸುತಂಬರ್ಪುವಯ್ಯಶೀವ್ಯದರೂಪಿಂ । ೨೩

ಬೇಗದೆಲಾಲಿಸುಸೇವಕ
ಭಾಗದೆಮಹದಾತ್ಮತತ್ತ್ವವದುಭಕ್ತಿಯೊಳಂ
ಯೋಗಾಂಗಂಭೋಗಾಂಗಂ
ತ್ಯಾಗಾಂಗವಿದೆಂಬತೆರದೆತಾಮೂರಾಯ್ತು । ೨೪

## (ಉತ್ಪಲಮಾಲಾವೃತ್ತ)

ಯೋಗದಕಾಯವೇ ಶಿವನಕೂಡಿಕೆ ಭೋಗದಕಾಯತತ್ ಶಿವಂ
ಭೋಗಿಪವಾಸತ್ಯಾಗದಮಹಾಂಗವೆ ತಾಶಿವನಲ್ಲದನ್ಯರಂ
ನೀಗಿಪುದಾಸುಯೋಗಮದು ಕಾರಣಕಾಯವು ಭೋಗಸೂಕ್ಷ್ಮವೈ
ತ್ಯಾಗದಕಾಯ ಸ್ಥೂಲತರಗಾತ್ರವು ಕೇಳೆಲೆನಂದಿದೇವನೆ । ೨೫

ಯೋಗದಕಾಯುಪ್ರಾಜ್ಞ ಮನುಗೊಂಡಿಹ ಭೋಗವೆತ್ತೈಜಸಂಮಹಾ
ತ್ಯಾಗನೆ ವಿಶ್ವಯೋಗದಮಹಾಂಗ ಸುಷುಪ್ತಿಯೊಳಿರ್ಪುದೈಮಹಾ

ಭೋಗವೆಸ್ವಪ್ನದಲ್ಲಿ ಬಿಡದಿರ್ಪುದು ತ್ಯಾಗವೆಜಾಗ್ರದಲ್ಲಿತಾ
ವೀಗಲೆ ಕಾಣ್ಬವಿಂತು ತ್ರಿವಿಧಾಂಗಗಳೀತೆರಕೂಡಿಕೊಂಡವೈ । ೨೬

ಯೋಗದಕಾಯುವೆಂಬುದದು ತಾಪರಮಾತ್ಮನು ಭೋಗದಂಗವು
ಬೇಗದೆಕೇಳ್ವುದಂತರ ಮಹಾತ್ಮನು ಜೀವದಗಾತ್ರನಿರ್ಪುದು
ತ್ಯಾಗದಕಾಯುಯೋಗವುಸುಭೋಗವು ತ್ಯಾಗವು ಮೂರುತನ್ನೊಳುಂ
ರಾಗದಿಭೇದವಾಗಿಯುವು ಕಂಡವು ಮೂರರೊಳಾರುರೂಪದಿಂ। ೨೭

## [ಶಾರ್ದೂಲವಿಕ್ರೀಡಿತವೃತ್ತ]

ಯೋಗಾಂಗಂ ನೆರೆದೈಕ್ಯಮೇಣ್ ಶರಣನೆಂದಾಭೋಗಕಾಯಂ ಪ್ರಸಾ
ದಂಗಂ ಪ್ರಾಣದಲಿಂಗವೆಂದೆನುತ ಲಾತ್ಯಾಗಾಂಗದಿಂದಾಸುಭ
ಕ್ತಾಂಗಂಮೇಣ್ಪರಮೇಶನಂಗವೆನುತಂ ತಾಷಟ್ಸ್ಥಲಂತೋರಲೀ
ಯಂಗಂಗಳ್ಗಿರುತಿರ್ಪಭಕ್ತಿಭರದಿಂ ತಾನಾರ್ಪೋಗಂ ತಾಳಿತ್ತೈ ॥ ೨೮

## ಕಂದಪದ್ಯ

ಸಮರಸಭಕ್ತಿಯುಮುತ್ತಂ
ಜವದಾನಂ ದಂಸುಭಕ್ತಿಯನುಭವಭಕ್ತಿ
ಅವಧಾನಭಕ್ತಿನೈಷ್ಠವಿ
ಭವಭಕ್ತಿಯು ಸತ್ಯಭಕ್ತಿಯೆಂದಾರಾಯ್ತೈ ೨೯

## ಚಂಪಕಮಾಲಾವೃತ್ತ

ಪರಿವಿಡಿಯಿಂದಲೈಕ್ಯತಲದಾಸನು ಭಕ್ತಿಯುಕೇಳುಮೋದದಾ
ವ ಶಿಘನಭಕ್ತಿತಾಶರಣಸ ಸ್ಥಲದಿಂದನು ಭಾವಭಕ್ತಿಯು
ಹರಣದಲಿಂಗಿಯಲ್ಲಿ ಸುಪ್ರಸಾದಿಯೊಳಾಂತವಧಾನಭಕ್ತಿಯು
ಪರಮನತಾಣನೈಷ್ಠಿಕವು ಭಕ್ತನೊಳಿರ್ಪುದುಸತ್ಯಭಕ್ತಿಯು ೩೦

(ಕಂದಪದ್ಯ)

ಇಂತಾರುಭಕ್ತಿತನ್ನಯ
ಸಂತಸಷಟ್ಸ್ಥಲದೊಳೈಕ್ಯಮಾಗಿರುತಿಹವೈ
ಮುಂತಿನ್ನುಕೇಳು ವೃಷಭನೆ
ಚಿಂತೆಯನಳಿಪೇಳ್ವೆಭಕ್ತನಂತರವೆಲ್ಲಂ । ೩೧

ತಿಳಿಯಲೆನಂದಿಯೈಕ್ಯಗೆ ಮಹಾಸದುಭಾವವೆ ಹಸ್ತಜ್ಞಾನವು
ಬಲುಶರಣಂಗೆಹಸ್ತ ಸುಮನಂನೆರೆ ಹಸ್ತವುಪ್ರಾಣಲಿಂಗಿಗಂ
ಹೊಳೆವ ಪ್ರಸಾದದಾತ್ಮಗದು ತಾನಿರಹಂತತೆಹಸ್ತಭಕ್ತಗಂ
ವಿಲಸಿತಚಿತ್ತಹಸ್ತ ಪರದೇವಗೆಬುದ್ಧಿಯೆ ಹಸ್ತವಾದವೈ । ೩೨

ಅರಿಯಲ್ತಾನರೆನಾತ್ಮನಂಗದಿರುವಾಸಜ್ಞಾನದಾಹಸ್ತದೊಳ್
ಮೆರೆದಿರ್ಪಾಸಮ ಭಕ್ತಿಯಿಂದೆ ಜೆರೆದಾಚಿಚ್ಛಕ್ತಿಸಲ್ಲಿಂಗಮಂ
ನಿರುತಂ ಪೂಜಿಪತಾನದೈಕ್ಯಬಳಿಕಂ ವ್ಯೋಮಾಂಗದೊಳ್ ಜ್ಞಾನಸ
ತ್ಕರದಿಂ ಭಕ್ತಿಪ್ರಸಾದಲಿಂಗಭಜಕಂ ಶರಣಂನಿಜಂ ನಂದಿಯೇ
ಶ್ವಸನಾಂಗಂಸುಮಹಸ್ತದಿಂದನುಭವಂ ತಾನೆಂಬಭಕ್ತಿತ್ತ್ವದಿಂ
ಮಿಸುಪಾಶಕ್ತಿಯ ಕೂಡಿದಾಚರಸುಲಿಂಗಂ ಪ್ರಾಣಲಿಂಗಾತ್ಮಕಂ
ಎಸೆವಾವನ್ಹಿಯಕಾಯದಲ್ಲಿನಿರಹಂಕಾರಾಖ್ಯದಾಹಸ್ತದಿಂ
ಲಸದಿಚ್ಛಾಮಯುಶಕ್ತಿಲಿಂಗಭಜಕಂತಾನಾಪ್ರಸಾದಾತ್ಮಕಂ । ೩೪

ಜಲದಂಗಂನೆರೆತಾಳಿಬುದ್ಧಿ ಕರದಿಂನಿಷ್ಠಾಂಕಸದ್ಭಕ್ತಿಯಿಂ
ಬಲುಸುಜ್ಞಾನದಶಕ್ತಿಯೊಂದಿಗುರುಲಿಂಗಂಪ್ಯಾನಿಮಾಹೇಶ್ವರಂ
ಇಳೆಯಂಗಾನ್ವಿತಚಿತ್ತಹಸ್ತದಲಿತಾಸದ್ಭಕ್ತಿಯುಂಬಾಖ್ಯದಿಂ
ಬೆಳಕಂಬೀರುವಲಿಂಗಪೂಜಕನವಂಭಕ್ತಂನಿಜಂನಂದಿಯೆ । ೩೫

( ಕಂದಪದ್ಯ )

ಇಂತಹಶಕ್ತಿಯಕೂಡಿಹ
ಸಂತಸಲಿಂಗವನುಯೋಗ್ಯಭಕ್ತಾಂಗದಲಿ

ಕಾಂತೆಯದೋಪನಭೋಗವ
ತಾಂತಳೆವಂತವನುಲಿಂಗಭೋಗಿಸಬೇಕೈ । ೩೬
ಅಂಗವುಲಿಂಗವುಭಿನ್ನತೆ
ವಿಂಗಡಿಸಲ್ಬಾರದಂತೆಮನವನ್ನೀಡಲ್
ಲಿಂಗವೆತಾನೆಯದಾಗುವ
ಲಿಂಗಾಂಗಸುಯೋಗಮಪ್ಪುದಂದಿಗೆನಂದಿ । ೩೭

## ವಚನ

ಇಂತಾಮಹೇಶಂಲಿಂಗಾಂಗಸಂಯೋಗವನ್ನೊರೆಯಲ್ನಂದೀಶಂ
ಮಾರುತ್ತರಂಗೊಡುತಲಾನಿಬ್ಬೆರಗಿನೊಳೇಳುತಿಂತೆಂದಂ ॥ ೩೮

(ಕಂದಪದ್ಯ)

ತಿಳಿಯದುನನಗೀಗಂನೀಂ
ತಿಳುಹಿದಲಿಂಗಾಂಗಸಂಗಮಿದರಂದವನು
ತಿಳುಹಿಸುಪುನರಪಿಕೇಳುವೆ
ನಳುಕಿಸುಮನಸಂದೆಗವನುಗಿರಿಜಾರಮಣ । ೩೯
ಎನ್ನಲ್ ಶಂಕರಪೇಳಿದ
ನಿನ್ನೊಮ್ಮಿದಪೇಳ್ವೆಕೇಳುನಂದೀಶ್ವರನೇ
ನನ್ನಂನಿನ್ನನ್ನೊಂದೆಯೆ
ನನ್ನಿಯೊಳಂತಿಳಿಯಬೇಕುನಿಲ್ಸಿದುಮನದೊಳ್ । ೪೦

## ಉತ್ಪಲಮಾಲಾವೃತ್ತ

ಲಿಂಗವೆತಾನೆತತ್ಪದವುತ್ತ್ವಂಪದತಾನೆಯದಂಗಕೇಳಿಲ್ರೈ
ಲಿಂಗಮದಂಗದ್ವೈಕ್ಯತೆಯುತಾನಸಿಸತ್ಪದಮಾಗಿತೋರ್ಪುದೈ
ಲಿಂಗವೆನಾದವಾತ್ರಿಪುಟಬಿಂದುವುಸಂಗವೆತಾನೆಚಿತ್ಕಳೆ
ಲಿಂಗವೆಬೊಮ್ಮನಂಗವೆಚಿದಾತ್ಮನುನಂದಿಯೆಮುಂದೆಲಾಲಿಸೈ । ೪೧

(ಕಂದಪದ್ಯ)

ಲಿಂಗವೆಮಂತ್ರವ್ರತಾವೇ
ದಾಂಗವೆಕ್ರಿಯೆಯವರಸಂಗಸಂಯ್ಯೋಗವ್ರತಾ
ಲಿಂಗಾಂಗಯೋಗವೆನಿಪುದು
ಮಂಗಲಮಯನಂದಿದೇವನೆಂದಪಿನಾಕಿ । ೪೨

ಇಂತೆಂದುದೇವನುಸುರಲ್
ಸಂತಸದಿಂಕೇಳ್ದನಾಗನಂದೀಶಂತಾಂ
ಮುಂತೋರ್ಪವಾರುಚಕ್ರವ
ನಾಂತರಿಯುವರೀತಿಯೆಂತುಪೇಳೆಲೆಯಭವಾ । ೪೩

ಬೋದಿಸುಷಟ್ಚಕ್ರದಸ
ದ್ಭೇದವನೆಂದೆನುತಮಣಿದುಬೇಡಲ್ಕವನಂ
ಮೋದದೊಳಿತ್ತುತಿಪೇಳಿದ
ನಾದಿನಮಣಿಯಕ್ಷಿದೇವಸಂತಸದಿಂದಂ । ೪೪

ಇರುವವು ಚಕ್ರವುಕ್ರಮದಿಂ
ವರಪೃಷ್ಠಸುಲಿಂಗನಾಭಿಹೃದಯಂತಾಭ್ರೂ
ವರಮಧ್ಯತಾಲುಗ್ರಹದೊಳ್
ನಿರುತದೊಳಾವಾಸವಾಗಿ ಕೇಳೆಲೆನಂದಿ ॥ ೪೫

ಇರುವವು ದಳಗಳಿಗಕ್ಕರ
ವೆರಡುಂ ಪದಿನಾರು ಮತ್ತ್ತದಲ್ಲದೆತಾಪ
ನ್ನೆರಡುಂಪತ್ತುಂ ಕ್ರಮದೊಳ್
ಮೆರೆಯುತತಾವಾರುನಾಲ್ಕು ಚಕ್ರಗಳಲ್ಲಿ ॥ ೪೬

ಈದಳಗಳೆಮೊದಲಕ್ಕರ
ಮೋದದಿತಾ ಅಕಾರಮಾದಿಳಕಾರಂತ್ಯಂ

ಬೋಧದಹಂಕ್ಷಂಬೀಜವು
ತಾಂದೋರಿಹವಾರುಚಕ್ರಮಧ್ಯಾಂತರದೊಳ್ । ೪೭

## ವಚನ

ಇಂತುಮಲ್ಲದೆ ಗಿರಿಶನೆಂದಂ । ೪೮

### [ಚಂಪಕಮಾಲಾವೃತ್ತ]

ಉರುತರದಾಜ್ಞೆಚಕ್ರ ಮೊದಲಾಗಿಹೆತಾಣದ ಮಧ್ಯದಲ್ಲಿತಾ
ನುರುಪ್ರಣಮಾಕ್ಷರಂ ಶುಭಶಿಕಾರವಕಾರಯಕಾರವೆನ್ನುತಂ
ಪರತರಬೊಮ್ಮನೋಸರಿಸಿತೊರ್ವ ನಕಾರಮಕಾರಮೆಲ್ಲವುಂ
ಮೆರೆವುವುಕೇಳ್ವುದೈ ಪರಮಲಿಂಗದ ಶೋಭೆಯನೆಂದಶಂಕರಂ ॥ ೪೯

### (ಮತ್ತೇಭವಿಕ್ರೀಡಿತವೃತ್ತ)

ಬಳಿಕಾಚಾರದಲಿಂಗತಾನೆಯೆನಕಾರಂ ಮುಂದೆತನ್ನೇತ್ರದೊಳ್
ಹೊಳೆದಿರ್ಪಾಗುರುಲಿಂಗ ಕೇಳಿಲೆಮಕಾರಂ ತಾಶಿಕಾರಾಖ್ಯವೈ
ತಿಳಿನೀನಾಶಿವಲಿಂಗವೇಚರವಕಾರಂ ತಾಪ್ರಸಾದಾತ್ಮಕಂ
ನಲಿವಾಶೋಭೆಯಕಾರವೈ ಪ್ರಣಮವೇತಾನಾಮಹಾಲಿಂಗವು । ೫೦

### ಕಂದಪದ್ಯ

ಕಡುಗಲಿನಂದಿಯೆಕೇಳ್ವೈ
ಷಡುಚಕ್ರದೊಳಿರ್ಪವಯ್ಯ ಸಡಗರದಿಂದಂ
ಷಡುಮಂತ್ರದಕ್ಕರಂಗಳ್
ಎಡೆವಿಡದಿದರಿಂದತಾಂ ಷಡಕ್ಷರಮಂತ್ರಂ । ೫೧

ರುಧಿರದೊಳಿಹುದುನಕಾರಂ
ಮೃದುಮಾಂಸದೊಳಾಮಕಾರ ಮೇಧಸ್ಸಿನೊಳಿ
ರ್ಪುದದು ಶಿಕಾರವಕಾರಂ
ಹೃದಯಾಸ್ಥಿಯೊಳಂ ಯಕಾರಮಜ್ಜದೊಳಿಹುದೈ । ೫೨

ಚರ್ಮದವಾಸಮದಾಗುತ
ನಿರ್ಮಳವೋಂಕಾರವೆಂಬಪ್ರಣವುನದಿಹುದೈ
ಕರ್ಮವನಾಶಿಪಮಂತ್ರದ
ಮರ್ಮವಕೇಳಿಂತು ತಾವುದೇಹದೊಳಿಹವು । ೫೩

ಸರ್ವಾಂಗವುಲಿಂಗದೆತಾ
ಸುರ್ವಪ್ರಕಾಶದಲಿ ಶೋಭಿಸುತ್ತಿರಲಂಗಂ
ಸರ್ವಾಂಗಲಿಂಗಿಯೆನಿಸುತ
ತೋರ್ವುದುನೀಂ ತಿಳಿದುಕರ್ಮಲಯಮಂಪೊಂದೈ । ೫೪

(ಚಂಪಕಮಾಲಾವೃತ್ತ)

ಎಸೆಯುವಸತ್ತು ಲಿಂಗಮುಹದಂಗವದೆನ್ನುತಲಾಯ್ತುದ್ವಂದ್ವವು
ಮಿಸುಪಸುಚಿತ್ತಶಕ್ತಿಯುರೆ ಭಕ್ತಿಯುದೆನ್ನುತದ್ವಂದ್ವವಾಯಿತು
ಪಸರಿಪಮೋದತಾನದು ಮಹಾರ್ಪಣಸ್ವೀಕೃತವೆಂದುತೋರಲಾ
ವೃಷಭನೆಮೂರುತತ್ವವರಷಟ್ಸ್ಥಲಮಾದವು ಕೇಳುನೀನಿದಂ ॥ ೫೫

**ಕಂದಪದ್ಯ**

**ಪರಶಿವಷಡ್ವಿಧಲಿಂಗಂ**
**ಪರಮಾತ್ಮನು ಷಡ್ವಿಧಾಂಗಶೋಭೆಯೊಳಿರ್ಪಂ**
**ಪರಶಿವನಂಗಮುಯಂ ತಾಂ**
**ಪರಮಾತ್ಮಂ ಲಿಂಗಶೋಭಿಯಾಗಿಹಕೇಳೈ । ೫೬**

## ವಚನ

**ಅದೆಂತೆನೆ ॥ ೫೭**

**ಮತ್ತೆಭವಿಕ್ರೀಡಿತವೃತ್ತ**

ಪರದೇವಂ ಷಡುಲಿಂಗಮಾಗೆಪರಮಾತ್ಮಂ ತಾನೆಷಡ್ಗಾತ್ರಮಂ
ತ್ವರದಿಂ ಪೊಂದುತಸರ್ವಲಿಂಗಿಯನಿಸಲ್ಸರ್ವೇಂದ್ರಿಯಂಬೀರುವ

ವರದೃವ್ಯಂಗಳನರ್ಪಿಸುತ್ತನಿರುತಂ ತಚ್ಛೇಷಮಂಸೇವಿಸಿ
ಭರದಿಂ ಭೇದಿಸಬೇಕುಚಕ್ರವರಿಯೈ ನಂದೀಶನೀನೆಂಪನು । ೫೮

## ಕಂದಪದ್ಯ

ಇಂತಿಹಚಕ್ರದಭೇದನ
ಕಂತುವಿನಾರಾತಿ ಪೇಳೆವ್ಯೆಮರೆಯುತತಾ
ಸಂತಸಗೊಂಡಂನಂದಿಯು
ಭ್ರಾಂತಿಯತಾನಳಿವ ಮನದಕಲ್ಪನೆನೀಗೀ । ೫೯

ನಯನಗಳಮುಚ್ಚಿಕೊಂಡುಂ
ನಯದಿಂನೋಡಿದನು ತನ್ನಮನದೊಳ್ನಂದೀ
ಭಯಮಂ ತೊರೆಯುತಲಾಗೌ
ರಿಯಪ್ರಿಯನಂ ಕೇಳ್ದಮುಂದೆಕೇಳ್‌ರಾಮೇಶ । ೬೦

## ವಚನ

ಇಂತಾಮುಹಾದೇವಂ ಷಟ್‌ಸ್ಥಲನಿರ್ಣಯುವನ್ನು ಸುರಲಾನಂದೀಶನ ಗಣಿತೆ ಸಂತಸಮೆಸಗಿ ದೇವನೊಳೆಂದನೆಲೆಗಿರಿಜೇಶನೀಂ ದಯಪಾಲಿಸಿದ ನಿರ್ಣಯದಿಂದನಾಂತಣಿದೆ ನಾದೊಡೆಮುಂದೆನಗೆ ಜೀವಶಿವರೈಕ್ಯಮಂಪೇಳ್ವು ದೆಂದೆರಗಲಾದೇವನರುಹಿದಂ । ೬೧

## ಗದ್ಯ

ಇದುಶ್ರೀಮದ್ವೀರ ಶೈವಾಚಾರಧು ರೀಣಶಾಂತವೀರ ದೇವರೊಡಲ ಬುದಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತವಾದ ಬಸವಜನ್ಮ ಮಹಾಕಾವ್ಯದೊಳ್ತ್ರಯೋದಶಾಶ್ವಾಸಂ ಸಮಾಪ್ತಂ ಅಂತೂಸಂಧಿ ಹದಿಮೂರ ಕ್ಕಂ ಗದ್ಯಪದ್ಯಂಗಳು ಹತ್ತುನೂರಾಹನ್ನೊಂದಕ್ಕಂ ಮಂಗಲಮಹಾ

# ಚತುರ್ದಶಾಶ್ವಾಸ ಪ್ರಾರಂಭ.

## ಚಂಪಕಮಾಲಾವೃತ್ತ

ಇರೆಮನೆಯಿಲ್ಲತಿನ್ನುವೊಡೆತಾನಶನಂ ಲವಮಾದೊಡಿಲ್ಲವೈ
ಪೊರೆಯುವತಾತಮಾತೆಯರದಿಲ್ಲವುನಾಮವದಿಲ್ಲದಾವಗಂ
ಧರಿಸಲುಭೂಷವಿಲ್ಲಪರಿಚಾರಕರೆಲ್ಲರುಭೂತಸಂಘವೈ
ಸಿರಿಯದುಶೂನ್ಯಮಂತದಕೆಶಂಕರನೀಂಪರದೇಸಿಯೆಂಬರ್ಕೈ । ೧

ಭವದೊಳುಬಾಳ್ವರಿಂಗೆಶಿರದಿಂಜಲವಿಕ್ಕಿದೆದೇವಲೋಕಕಂ
ಜವದೊಳಗಿಂದುಚಂದ್ರಿಕೆಯನೀಡುತಸಸ್ಯಸಮೃದ್ಧಿಗೈದೆನೀಂ
ರವಿಕಿರಣಂಗಳಿಂದೆಬೆಳಗುತ್ತೆಜಗಂಗಳಕೃತ್ಯಮಾಳ್ಪುದಂ
ಭುವನಕೆಸಾಸಗೈದುದಕೆನಾಡಜನರ್ಪಶುಪಾಲನೆಂಬರ್ಕೈ । ೨

## (ಕಂದಪದ್ಯ)

ಲಾಲಿಸುನಂದಿಯೆನೀನಿ
ನ್ನೀಲಿಂಗದೊಳೈಕ್ಯಮಪ್ಪಪರಿಯಂಪೇಳ್ವೆಂ
ಮೂಲಂಲಿಂಗಾಂಗದಸ
ಮ್ಮೇಲಂಸದ್ಭಕ್ತಿಮುಖ್ಯನಿರ್ಗುಣದಲ್ಲಿ । ೩

## (ಮತ್ತೇಭವಿಕ್ರೀಡಿತವೃತ್ತ)

ವರಭಕ್ತಂಸಮಭಕ್ತಿಯಿಂಸಮರಸಂತಾನಾಗೆಸಂಸರ್ಗತಾ
ಪರಿದುಂನಿಶ್ಚಬುದಂತುತೋರುವದುತಾನೆಂತೆಂದೊಡಾಂಪೇಳ್ವೆನೈ
ಹರಿಜೊನ್ನಾಗಸವಾಯುದೀಪಬೆಳೆಗಂಮಾಣಿಕ್ಯತತ್ಕಾಂತಿಯಿಂ
ಪರಿಶೋಭಂಪಡೆದಿರ್ಪವೋಲಭವನಿಂಕೂಡಿರ್ಪನಾಜೀವನು । ೪

(ಕಂದಪದ್ಯ)

ಲಿಂಗದೊಳಂಗದಕೂಡಿಕೆ
ಸಂಗಡಿಸಲ್ಕು ಭಯವಳಿಯುತೀಕಾಗುವದೈ
ಮಂಗಲಮಯಕೇಳೈಘನ
ಲಿಂಗೈಕ್ಯನದೆಂದಜೀವಕಂಗಳತ್ರಿತಯಂ । ೫

ಉತ್ಪಲಮಾಲಾವೃತ್ತ

ಈತೆರಲಿಂಗಸಂಗವದುಯೋಗವುಯೋಗನಿವೃತ್ತಿ ತಾನದ
ದ್ವೈತವುತಾನದಂತಿಳಿಯಲೈಕ್ಯವದೈಕ್ಯವೆತಾನೆಮೋಕ್ಷವೈ
ನೀತಿಳಿಮೋಕ್ಷತಾನೆಯದುಶಾಂತಿಯುಶಾಂತಿಯೆಮುಕ್ತಿಯಪ್ಪುದೈ
ಭೂತಳಜೀವಿಗಳ್ಗಿದನುಬೀರುತತೋರಿಸುಮುಕ್ತಿಮಾರ್ಗಮಂ । ೬

ಕಂದಪದ್ಯ

ಮುಕ್ತಿಗೆಯೋಗವೆಮೂಲಂ
ಮುಕ್ತಿಯೆತಾನಧಿಕನಂದಿಪೆರತಿಲ್ಲದಕಂ
ಮುಕ್ತಿಯುಬರುವದುಗಹನಂ
ಮುಕ್ತಿಯುದೊರಕೊಳ್ವತೆರನಕೇಳ್ವುದುನೀನು । ೭

ಯೋಗದಸಾಧನಗೈಯದೆ
ಬೇಗನೆಬರಲಾರದಿಂಥಮುಕ್ತಿಯರೂಪಂ
ಯೋಗಿಯನೇತ್ರದೊಳಿಲ್ಲಾ
ತ್ಯಾಗಂಜಗಮೆಂದುಕಾಂಬುದರಿನಂದೀಶ । ೮

ಯೋಗಿಯುತನ್ನಯದೇಹವ
ನಾಗಿರಿಜೇಶನೊಳುಭಿನ್ನವಿಲ್ಲೆಂದೆಂಬಂ
ಭೋಗಿಪವಿಷಯಗಳೆಲ್ಲಂ
ಭೋಗಿಪಭೂಪನಿಗೆತಾನದರ್ಪಿತವೆಂಬಂ ॥ ೯

(ಉತ್ಪಲಮಾಲಾವೃತ್ತ)

ಲಿಂಗವೆತಾನೆಯಾಗಿ ಸುಖಗೂಡುವಲಿಂಗದೊಳೂಟಮಾಡುವಂ
ಲಿಂಗವೆಕೊಳ್ಳುದೆನ್ನುತುಣಿಸಂ ಪರಲಿಂಗವೆಯಾತ್ಮನೆನ್ನುತಂ
ಪಿಂಗದೆತಾಪ್ರಸಾದಪಡೆವಂ ಘನಲಿಂಗದಶೋಭೆಯಿಂದತಾ
ನಂಗದರೂಪುಗಂಧರಸಶಬ್ದವ ನೋಂಕನುಕಾಣದಿರ್ಪನೈ । ೧೦

ಕಂದಪದ್ಯ

ಬಳಹೊರಗೆ ಲಿಂಗಮಯದಾ
ಕಳಿಯಂಕಾಣುವನು ಯೋಗಿಕೇಳ್ನಂದೀಶ
ಬೆಳಕಂಕೂಡಿಹರವಿಯೊಳ್
ಮಲೆತಿರುವಾ ತಮದರೂಪುನಿಲ್ಲುವದುಂಟೆ । ೧೧

ಎತ್ತಂನೋಡಲ್ಕವಗಂ
ಬಿತ್ತರಿವುದುತೇಜದಿಂ ಸುಶೋಭಿಪಲಿಂಗಂ
ಮತ್ತೆಲ್ಲಿ ವಿಷಯುವವನಿಗೆ
ಚಿತ್ತಂ ಮುದಮಾಂತುತಾನೆ ಲಿಂಗೈಕ್ಯಂಕೇಳ್ । ೧೨

ದೇಹದಪರಿವೆಯದಿಲ್ಲದೆ
ತಾಹೋಗುವ ಸಮಯಕಲ್ಲುಮುಳ್ಳುಗಳಿಂದಂ
ದೇಹದ ಬಾಧೆಯಕೊಳ್ಳಂ
ಮಾಹಾತ್ಮಿಕ ಯೋಗಿಯಂತೊಲಿಂಗದನಿಷ್ಠೆ । ೧೩

ಒಟ್ಟಿಗೆ ಕೇಳ್ನೈನಂದಿಯೆ
ನಿಷ್ಠೆಯೊಳಂತಿಳಿವಲಿಂಗನಾನೆಂದೆನುತಂ
ಸೃಷ್ಟಿಯೊಳಿದೆ ಶೋಭಿತವಹ
ಶ್ರೇಷ್ಠತ್ವವ ತಳೆದತತ್ತ್ವಮಸಿಘನವಾಕ್ಯಂ । ೧೪

**ತತ್ತ್ವಮಸಿಯೆನ್ನುವೊಡೆತಾ**
**ನತ್ಯುತ್ತಮವಾಕ್ಯದರ್ಥಮದುನೀನೆಂದುಂ**

ಯುಕ್ತತೆಯಿಂ ಪೇಳುವುದೈ
ಮುಕ್ತಂ ನೀನಿರುವೆ ನೀನುನಾನೆಂದನ್ನೈ । ೧೫
ಎನ್ನಲ್ಕಂದಿಯುಕೇಳ್ದಂ
ಪನ್ನಗಭೂಷಿತನೆತತ್ತ್ವಮಸಿಯೆಂದೆನಿಪ
ಉನ್ನತವಾಕ್ಯದನಿರ್ಣಯು
ಸನ್ನಿಯೊಳಂ ಪೇಳುಕೇಳ್ದೆನೆಂತೆಂದಂತಾಂ । ೧೬
ಎನಲಾಶಂಕರನಾಕರ್ಣಿಸಿ ತತ್ತ್ವಮಸಿಮಹಾವಾಕ್ಯನಿರ್ಣಯಮಂ
ಪೇಳಲನುವಾದಂ । ೧೭
ಎಲೆನಂದಿತತ್ತ್ವಮಸಿತಾಂ
ಬಲುದೊಡ್ಡಿತ ಮಲ್ಲಯೋಗಿಯಂತರದೊಳಗಂ
ಕಲುಷಂ ಪೂರಿತಗರಿದದು
ಮಲರಹಿತಂ ನೀನುನಿನಗಪೆಂತಪದಳಿನ್ನೈ । ೧೮
ಪಿಂದೊಂದುಕಾಲದಲಿನಾ
ನಂದದೆಷಣ್ಮುಖನಿಗಿದನು ಪೇಳಿದೆನೈಮ
ತ್ತಿಂದಿಗೆಬಂದಿತುತಾನಾ
ನಂದಮಹೋತ್ಸವವು ಪೇಳ್ವೆನೆಂದಂದೇವಂ । ೧೯

## (ಚಂಪಕಮಾಲಾವೃತ್ತ)

ಪರಮನುಕಾಯವೀರ್ವರೊಳು ಪಾಧಿಯುದಾದವು ' ಕಾರ್ಯಕಾರಣಂ
ಭರದಲಿಕೇಳುಕಾರ್ಯಮಲಿನಂ ಘನಕಾರಣಸತ್ವತೇಜತಾ
ನರಿಯುತಕಾಯಕಾರಣದ ಭೇದವನಳ್ಕಿಸಿ ಜೀವಲಿಂಗಮಂ
ಸರಿಯನುತಂ ಮುದಂಗೊಳಲದೇಯುಸಿ ಸತ್ಪದನಂದಿದೇವನೇ । ೨೦
ಪುಸಿಯಿದುಕಾಣ್ಬತೇಜ ಜಗವೆಲ್ಲವು ನನ್ನಲಿಪುಟ್ಟನಾಶಮಂ
ದುಸುರ್ವುದುಸತ್ಯಕಾಂಬಜಗಮಿಥ್ಯವಿದೆನ್ನಲಿ ಬ್ರಹ್ಮರುದ್ರರು
ಪಸರಿಪರೆಂಬಶೋಭೆಬಡುತಂ ಘನಮೋದದಖಂಡನಾದೆನೆಂ
ದೆಸೆವಸುಮೋದತಾನಸಿಯು ಕೇಳೆಲೆಜೀವನಮುಕ್ತಿಮಾರ್ಗಮಂ । ೨೧

## ಉತ್ಪಲಮಾಲಾವೃತ್ತ

ಹೋಗುಪಬರ್ಪ ಕಾಯಮೆನಗಿಲ್ಲವು ರೋಗದಭೀತಿಯಿಲ್ಲವೈ
ಸಾಗುವಸಾವದಿಲ್ಲ ವ್ಯಸನಂಗಳದಿಲ್ಲವದಿಲ್ಲಶೂಲವು
ನೀಗಿಸಲಾಗದಗ್ನಿಜಲದುಃಖಗಳಿಲ್ಲವು ನಾನುನಿತ್ಯದಿಂ
ಭೋಗಿಪವಸ್ತುವಿಲ್ಲವೆನುತಂ ತಿಳಿಯಲ್ಲಸಿಯೆಂಬಲಕ್ಷಣಂ ೨೨

## ಕಂದಪದ್ಯ

ಪೊಡೆವವನು ನಾನುಮತ್ತಾ
ಪೊಡೆಯುವ ಬಾಧೆಯನು ತಾಳುವವನಾನೆಂದುಂ
ಪೊಡೆಯುವಪೆಟ್ಟದುನಾನೇ
ಪೊಡೆಪೆಟ್ಟಿನಶಬ್ದ ನಾನೆಕೇಳಸಿಪದವೈ
ನುಡಿವವನು ನಾನುಮತ್ತುಂ
ನುಡಿಸುವಪರದೇವನಾನು ನುಡಿಯುವಶಬ್ದಂ
ಬಿಡದಿರ್ಪುದುನಾನೆಂದೀ
ನುಡಿಯಂದದೆ ತೋರ್ಪುದಿದುವೆಯಸಿಪದವೆಂದಂ । ೨೪

ಎಲೆವೃಷಭಬ್ರಹ್ಮಮಯನಾಂ
ನೆಲಸಗ್ಗದೊಳಿಲ್ಲವೆನ್ನಪೆರತೊಂದೇನುಂ
ಬಲುನಿತ್ಯನುನಾನೆಂತೈ
ಪಲೆಪೇಳುವನುಡಿಯೆಕೇಳ್ವುದಸಿಪದವೆಂದಂ । ೨೫

## [ಮತ್ತೇಭವಿಕ್ರೀಡಿತವೃತ್ತ

ಅಸಿರೂಪಂತಿಳಿಯಲ್ಕೆಬರ್ಪುದಿದುಕಷ್ಟಂ ಕೇಳೆನಂದೀಶನೀ
ನೆಸೆಯಲ್ಸಾಧನ ನಾಲ್ಕುಮೇಣ್ಗುರುವಿನೊಳ್ ಸತ್ಸೇವೆಯಂ ಮಾಡಿನಿ
ನ್ನಸುವೇಲಿಂಗಮದೆಂಬುದನ್ನರಿಯುತಂ ನಿಶ್ಶಂಕೆಯಂ ಪೊಂದಲು
ಮುಸುಕಿರ್ಪಾತಮನಾಶಗೈವಗುರುಬೋಧಾರ್ಕಂಕರಂತೋರ್ಪುದೈ । ೨೬

## ಉತ್ಪಲಮಾಲಾವೃತ್ತ

ಸಾಧಿಸುತಷ್ಟಯೋಗಗಳ ಪ್ರಾಣದವಾಯುವ ತಂದುಕುಂಭದೊಳ್
ಸಾಧನದಿಂದರೇಚಕವ ಪೂರಕಗೊಳ್ಳಿಸಿಯಾರುಚಕ್ರಮಂ
ಭೇದಿಸಿಪೋಗಿ ಸೂಷುಮನವನ್ನೊಡೆದೀದಳಮೇಲೆಸೇರುವಾ
ಬೋಧೆಯನೀವಸದ್ಗುರುವಿದೊಂದು ಸುಮಾರ್ಗವುನಂದಿದೇವನೇ

## (ಕಂದಪದ್ಯ)

ಗುರಿಯನಿಡೆ ಬ್ರಹ್ಮದಲಿತಾ
ಹರಿಹರರಜರೊಂದೆಯಂಬುದರಿಯುತನುನದಿಂ
ಗುರುತಿನಲಿಗುರಿಯನಿಲ್ಲಿಸೆ
ವರಲಿಂಗವೆ ತಾನದಪ್ಪನೈಸಾಧನೆಯಿಂ

## ಮತ್ತೇಭವಿಕ್ರೀಡಿತವೃತ್ತ

ಸ್ಥಿತಿಯಂನಾಲ್ಕುನುತಾಳಿಭೂಮಿಕೆಗಳಂ ತಾನಾಶಮಂಗೈವುತಂ
ಮತಿಯಿಂಬ್ರಹ್ಮವುತಾನದೆಂಬನುಡಿಯೊಳ್ಕೂಡುತ್ತಸದ್ಬ್ರಹ್ಮದಿಂ
ರತಿಯಂತೋರುತಬ್ರಹ್ಮದಾರಣದೆಸನ್ನಿಷ್ಠಾಂಕತಾನಾಗುತಂ
ಹಿತದಿಂಚಿತ್ತದತಾಳ್ಮೆಯಿಂದಲಿರೆಸಾಕ್ಷಾತ್ಕಾರತಾನೆಂದನು । ೨೯

ನಿಲೆತಾಂದೃಷ್ಟಿಯುತೇಜಪೊಂದುವನವಂ ತಾನಿತ್ಯಬ್ರಹ್ಮತ್ವದಿಂ
ಕಳೆವಂಬಾಹ್ಯದತೇಜವನ್ನೊಳಗೆತಾಂ ಕೂಡಿರ್ಪಮಾಯಾಂಧಮಂ
ಪೊಳೆವಂಸರ್ವವುತಾನದೆಂದುರವಿಗೂಡಿರ್ಪಂಥಸತ್ತೇಜತಾ
ಬೆಳಗಲ್ಕೋದವಪೊಂದಿನಿತ್ಯನೆನುತಂ ಶೋಭಾಂಗದಿಂದಿರ್ಪನು । ೩೦

## (ಚಂಪಕಮಾಲಾವೃತ್ತ)

ಪರಿವುದುಜೀವಭಾವಪರದೇವನೆತಾನೆನುತಂಸುಪಾಶಗಳ್
ಪರಿವವುಕಾಮಕ್ರೋಧಮದದುರ್ವಿಷಯಂಗಳುನಾಶವಪ್ಪವೈ

ದುರಿತದಕಾರ್ಯಮಂಕೊಳಿಸುವಿಂದ್ರಿಯವೆಲ್ಲವುಸೌಖ್ಯರೂಪದಿಂ
ಮೆರೆವವುಧೀರನಾದವಗೆಯೋಗಿಯವಿಕ್ರಮವೆಂಥದೊಡ್ಡಿತ್ತೈ । ೩೧

(ಕಂದಪದ್ಯ)

ಇಂತಹಯೋಗಿಯೆದಿರುವಿಕೆ
ಕಂತುವಿನಾರಾತಿಗವಗೆಪೆರತಿಲ್ಲೆಂದು
ಸಂತಸದಿಂತೋರುತವಾನ
ವಂತರಿಸದೆಲಿಂಗೈಕ್ಯನಪ್ಪನವನೀತಿಳಿಯೈ । ೩೨

(ಉತ್ಪಲಮಾಲಾವೃತ್ತ)

ಕೇಳಿಲೆನಂದಿಜೀವಮುಕುತಂಗದುಪಾಸನವಿಲ್ಲವಾಸನಂ
ಪೇಳುವದೇನುನೇಮಜಪಪುಷ್ಪಗಳಿಲ್ಲವದಿಲ್ಲವರ್ಚನಂ
ತಾಳುವಕಾರ್ಯಮಿಲ್ಲವುವಿಸರ್ಜನವಿಲ್ಲವುಪ್ರಾಣಮಂತ್ರಗಳ್
ಬಾಳುತಸರ್ವಸಾಕ್ಷಿಕನುತಾನೆನುತಿರ್ಪನುಯೋಗದಿಂದಲಿ ॥ ೩೩
ಜೀವವದೆಂಬುನೇನೆನಲುಭ್ರಾಂತಿಯುಭ್ರಾಂತಿಯರೂಪುನಾಶದಿಂ
ಜೀವವುನಾಶಮಾಗಿನರಚೇತನಶುದ್ಧನದಾಗಿತೋರ್ಪನೈ
ಜೀವನುದೇವದೇವನೊಳಗೈಕ್ಯನದಿರ್ಪನುಜೀವಶಬ್ದತಾ
ಭಾವನಮಾತ್ರವಲ್ಲದದುನಿತ್ಯದೊಳಿರ್ಪುದದಲ್ಲಕೇಳಿಲೈ । ೩೪

( ಕಂದಪದ್ಯ )

ಮಿತ್ರಗೆಪುಸಿಯಿಂಪುತ್ರಿಯು
ಪತ್ತಿಹಳೆಂದೆನಲುಮಿತ್ರಸೂತಕವಡೆದಂ
ಮಿತ್ರನುಸುಳ್ಳೆನೆಬೇಗದಿ
ಮಿತ್ರಸುತಾಂಪೇಳ್ದನಾನುನಿರ್ಮಲನೆನುತಂ । ೩೫
ಸಾವನುಪೇಳಲುಸೂತಕ
ಭಾವಿಸಿದಂದದೊಳಿಜೀವಭಾವವಿದಾಯ್ತೈ

ಸಾವದುಸುಳ್ಳಿರೆಕಾಯುವು
ಪಾವನಮಿರ್ಪಂತೆಜೀವಭ್ರಾಂತಿಯುದಳಿಗುಂ । ೩೭
ಮೃಗಜಲಕಂಡೆರಳಿಯುತಾ
ಲಗುಬಗೆಯಿಂನೀರಿನಾಶೆಗೊಡುವತೆರದಿಂ
ಜಗಜೀವನಂಬುತಾತ್ಮಂ
ಬಗೆಗಾಣನುಕೇಳುನಂದಿಮತ್ತುಂಪೇಳ್ವೆಂ । ೩೭

ಉಡುದಾರಪರಿಚುಬೀಳಲ್
ತಡಿಯದೆಕೌಪೀನತಾನು ಬೀಳುವತೆರದಿಂ
ಪಿಡಿದಿಹಜೀವಭ್ರಮೆತಾಂ
ಬಿಡುಗಡೆಯಾಗಲ್ಕೆನರನುಪಾವನನಪ್ಪಂ । ೩೮

ಜೊಳ್ಳುಬೀಜವನು ಬಿತ್ತಲ
ದೊಳ್ಳೆಯ ಫಲಬರ್ಪುದೇನೊ ನಂದೀಶನೆಕೇಳ್
ಸುಳ್ಳೇ ಭ್ರಾಂತಿಯನಂಬಲು
ಕಲ್ಲಂಪಾಯ್ದಂತೆ ಕೆಡನೆಪಾಮರನರನು । ೩೯

ಮನದಲ್ಲಿಬೆರೆದಜೀವನು
ಘನಕಷ್ಟವತಾಳ್ದುಗುರುವು ಪೇಳಿದನುಡಿಯಂ
ಮನದಲ್ಲಿ ಸತತನಿಲ್ಲಿಸೆ
ಮನದಾಭ್ರಾಂತಿಯುದು ಪೋಪುದೆಲೆನಂದೀಶ । ೪೦

ಚಿಲಕವನು ಬಿಟ್ಟುಕೊಂಡಿಗೆ
ಬಲವಾಗಿಹ ಕೀಲಿಹಾಕಿ ಬಂದಾಯ್ತೆನುವೊಲ್
ನೆಲೆಯುನ್ನರಿಯದೆಭ್ರಮೆಯಿಂ
ಬಲೆಯಿಂ ಬೀಳಲ್ಕೆಭವವು ಪಾರಾಗುವದೇ । ೪೧

ಎಲುವನ್ನುಪಿಡಿದುಮಾನವ
ಜಲದೊಳ್ಮುಳುಮುಳುಗಿ ಶುದ್ಧನೆಂದೆನುತಂತಾಂ

ನಿಲಿಸದೆ ನಿಶ್ಚಿತಮನಮಂ
ಚಲಿಸುವಭವರೋಗಕವನೆಯಪ್ಪಂಮೂಲಂ । ೪೨
ನೆಲದೊಳುನೀರಿರೆತಾನದು
ಕಲಕಲುಸಲೆರಾಡಿಯಪ್ಪ ತೆರದಿಂತನ್ನಾ
ಕಲಶದನೀರಂ ಕಲಕಲ್
ಕಲಕಮುದಾಗುವದೆ ನಂದಿತಿಳಿಯಿಪರಂಗಂ । ೪೩

ಪರುಷದಖಣಿತನ್ನೊಳಿರಲ್
ಬರುವದೆಬಡತನವ ದಗ್ನಿನೆರೆಯೊಳಗಿರಲುಂ
ಮರುಗುವನೆಹಿಮುದೆಗುರುವಿನ
ಚರಣವನಂ ಬಿಪದೆ ಭವದತಾಪವವಹುದೇ । ೪೪

ಅದರಿಂದನಂಬುಗುರುವಿನ
ಪದಮಂ ಬಿಡಬೇಡನಿನಗೆಗತಿಯಾಗುವಬ್ಬೈ
ಮುದದಿಂದಧರೆಗೆಮೋದಪ
ಸುಧೆಯಂ ನೀನೀಡುನಂದಿನಿನಗಿದುಕೀಲಂ । ೪೫

ಗುರುಬಿಟ್ಟಮನುಜಜೀವಿಗೆ
ಪರಿಣಾಮವದಿಲ್ಲಕೇಳು ಗುರುವಿಂಸುಖವೈ
ಗುರುವಂ ನಂಬುತೆನಡೆಯಲ್
ಸರಸದೆ ಗುರುನಿನಗೆ ತಿಳಿಪಸತ್ಯಂ ನಂದೀ । ೪೬

ನದಿಯಂ ದಾಂಟುವಮನುಜಂ
ನದಿಯಾತಟದಲ್ಲಿ ನೌಕೆತಾನಿರೆ ನದಿಯಂ
ಮುದದಿಂ ದಾಟಿಸುವಂಬಿಗ
ನೊದಗುವವರೆಗಂತೆನಿಲ್ವನೌಕೆಯ ಫಲವೇಂ । ೪೭
ಭವಸಾಗರದಾಟುವೊಡಂ
ತವಕದೆತಾಜ್ಞಾನವೊಂದೆ ದೊರೆಯಲ್ಬಹುದೇ

ಭವನಾಶಕಗುರುಪಾದಾ
ಬ್ಜವತಾಕಾಣದಲೆನರಗೆ ಮುಕ್ತಿಯದುಂಟೇ । ೪೮

ಇದುಕೇಳುಜೀವಮುಕ್ತಿಯ
ಹದನಂನಂದೀಶಯಿದನುಗೌಪ್ಯದೊಳಿಡುನೀಂ
ಮದಮೂರ್ಖಕುಹಕನಿಂದಕ
ರಧಮಾಧಮರಿಹರಕರ್ಣಕಿಕ್ಕಲುಬೇಡೈ । ೪೯

## ಉತ್ಪಲಮಾಲಾವೃತ್ತ

ಪಾಲೊಳುಪಾಲುನೀರಿನೊಳುನೀರದುಸಕ್ಕರೆಯಲ್ಲಿಸಕ್ಕರೆ
ಲೋಲದಿಕೂಡಿಶೋಭಿಸುವಪೋಲದುಲಿಂಗದೆಜೀವಮುಕ್ತನು
ಪೋಲುವನಂದಿಬಾರದಿದುಸದ್ಗುರುಬೋಧೆಯತಾಳದಿರ್ದರೆ
ಪಾಲಿಪನಲ್ಲಮುಂನಿನಗೆಭೋದಿಸಿಭೂಮಿಯೊಳೀಗಪೋಗುನೀ । ೫೦

## (ಕಂದಪದ್ಯ)

ತತ್ವಮುಸಿಮೂಲವಾಕ್ಯಂ
ಚಿತ್ತಜಹರನಲ್ಲಿಬೆರೆವಸಾಮರಷಮಿದಂ
ಕೃತ್ತಿಸುವಸನಂನಂದಿಗೆ
ಬಿತ್ತರಿಸಿದನಿದನುಲಾಲಿಪಾತನೆಪುಣ್ಯಂ । ೫೧
ಈಜೀವಮುಕ್ತಿವಿವರವು
ತಾಜೀವಿಗಳಘವನಾಶಗೈಯುವದದರಿಂ
ಪೂಜೆಯಮಾಡುತಲಿದನಾ
ನಾಜನ್ಮಾರಭ್ಯಪಠಿಸಬೇಕೆಂದಂತಾಂ । ೫೨
ನೀಚನಿಗೆನೀತಿರಹಿತಗ
ವಾಚೆಗೆವಾಂದಿಪಗೆಪರರಹಿಂಸಾಪರಗಂ
ತೋಚದುತಾನೀಸವಿಯದು
ವಾಚಕರಿದನರಿದುಪೇಳ್ವುದೆಲ್ಲಾಜನದೊಳ್ । ೫೩

ಓದುವದಿದುನಿತ್ಯದೆಶಾ
ನೋದುವದಾಗದಿರೆನೋಮುಗುರುವಾರದೊಳಂ
ಓದುವದಿದುಭಕ್ತಿಯೊಳಂ
ದೋದಿದನಾದೊಡೆಯುಸಕಲಸಂಪತ್ಸಿದ್ಧಿ । ೫೪

ಕೇಳುತಲೀಚರಿತೆಯಮೇಣ್
ಪೇಳುತನೋದದಲಿಸರ್ವಸಾರವುನೆಲ್ಲಂ
ಬಾಳುತಮನುಜಂತಾನಿರೆ
ಫಾಲಾಕ್ಷನುಸೌಖ್ಯವದವಕೊಡುವುನುಸತ್ಯಂ । ೫೧

## — ವಚನ —

ಇಂತುಮಾವಲ್ಲಭಂನಂದಿಗೊರೆಯಲ್ಕಂತುಕ್ಕು ವಾನಂ ದರಸದೊಳೋಲಾಡಿಕಂತುವಿನಾರಾತಿಪಾದದೊಳ್ಬೀಳ್ಟು ನಂದೀಶನೆಂದನೆಲೆದೇವನಾಂಧರೆಗಿಳಿದಪೆನಾಜ್ಞೆಯಂ ನೀಡುಕಲ್ಯಾಣದೊಳ್ನಿನ್ನಶರಣರಂಬರಮಾಡುನನಗವರ । ಸಂಗಮಂನೀಡುಪಂಚಪರುಷವನೆನಗೆದಯಪಾಲಿಸುನೀನೆ ನ್ನಹೃದಯದೊಳ್ಮನೆಗೈಸುವೀರಶೈವವನುಮೆರೆಸುನೀನೆನ್ನ ನುದ್ಧರಿಸುತೆನ್ನಯೋನಿಜನೆನಿಸುಸರ್ವಭಾರವುಂನೀಂಧರಿಸು ವದೆಂದೆರಗಲಾಶಶಿಮೌಳಿತತ್ತದ್ವರಗಳಂದಯಪಾಲಿಸಲವಂ ಗಿರಿಜಾಧವಂಗೆವಂದಿಸಿತೆರಳಿದಂ ॥

## ಗದ್ಯ

ಇದುಶ್ರೀಮದ್ವೀರಶೈವಾಚಾರಧುರೀಣಶಾಂತವೀರದೇವರೊಡಲಬುಡಿ ಚಂದಿರಕವಿತಾಮಂದಿರಗುರುಲಿಂಗಕವಿರಚಿತಬಸವಜನ್ಮಮಹಾಕಾವ್ಯ ದೊಳ್ಚತುರ್ದಶಾಶ್ವಾಸಂ ಸಮಾಪ್ತಂ ।

ಅಂತುಸಂಧಿಹದಿನಾಲ್ಕಕ್ಕಂ ಗದ್ಯಪದ್ಯಂಗಳುಹತ್ತುನೂರಾಅರವತ್ತೇಳ ಕ್ಕಂಮಂಗಲಮಹಾ ॥

# 卐 ಪಂಚದಶಾಶ್ವಾಸ ಪ್ರಾರಂಭ. 卐

## ಉತ್ಪಲಮಾಲಾವೃತ್ತ

ಪಾವನರಾದಪಾಂಡವರ ನೀತಿರಿದುಣ್ಣಿಸಿ ತಾಪದೋರಿದ್ದೈ
ಭಾವಿಸೆಪೂರ್ವಮಂ ಮರೆದರಾಮನಕಾನನಕಿಟ್ಟುಸೀತೆಯಿಂ
ರಾವಣನಾಶಗೈದೆನರಪಾಲನನೀಂ ಪೊಲೆಯಾಳಮಾಡಿದ್ದೈ
ದೇವನೆ.ನಿನ್ನನುಜ್ಞೆಯೊಳುವರ್ತಿಪುದೀಜಗವೆನ್ನರಕ್ಷಿಸೈ । ೧

ಭಾವಜನಾಟದೊಳ್ಮಡಿದ ಪಾತಕಿಗಂನಿಜಮೋಕ್ಷತೋರಿದ್ದೈ
ಸಾವಿಗೆಯಂಜಿಚೀರ್ವ ಮುನಿಬಾಲಗೆನೀಂಸ್ಥಿರಜನ್ಮಮಾಡಿದ್ದೈ
ಜೀವಿಯನಾಶದಿಂತಣಿದ ವ್ಯಾಧನಯೋಗಿವರೇಣ್ಯನೆನಿಸಿದ್ದೈ
ದೇವನೆನಿನ್ನನುಜ್ಞೆಯೊಳುವರ್ತಿಪುದೀಜಗಮೆನ್ನರಕ್ಷಿಸೈ । ೨

## ಕಂದಪದ್ಯ

ಎಲೆಸಿದ್ಧರಾಮಕೇಳ್ನೀಂ
ಮಲಹರತಾನಿಂತು ನಂದಿದೇವನಕಳಿಸಲ್
ವಿಲಸನ್ಮೋದವಪೊಂದುತ
ಕಲಹಪ್ರಿಯಬಂದನಾಗ ಭೂಲೋಕದೊಳಂ । ೩

ಕರದೊಳು ವೀಣೆಯಧರಿಸುತ
ಭರದಿಂ ಬಾರಿಸುತ ಮುನಿಯುಮೋದವತಳೆದುಂ
ಗಿರಿದುರ್ಗವನಪುರಂಗಳ
ತ್ವರದಿಂದಾಂಟುತಲಿ ಬಾಗೆವಾಡಿಯಕಂಡಂ । ೪

ಬಾಗೇವಾಡಿಯಘನಸೌ
ಭಾಗ್ಯೋದಯುವೇನು ಪೇಳ್ವೆಯಾನಗರವುತಾ

ನಾಗೇಶಮಸ್ತಕಾನ್ವಿತ
ಭೂಗೋಲದೆ ಮುಖ್ಯವೆಂಬತೆರದಿಂದಿತ್ತೈ । ೫
ಅಲ್ಲಲ್ಲಿಗೆ ತೋರುತಲಿಹ
ಸಲ್ಲಲಿತದವಾಪಿ ಕೂಪಪುಷ್ಕರಣಿಗಳಿಂ
ಮಲ್ಲಿಗೆ ಸಂಪಿಗೆಗಳತರು
ವಲ್ಲಿಗಳಿಂ ಶೋಭೆಯಾಂತುದೇಂ ಬಣ್ಣಿಸುವೆಂ । ೬
ಪುರದಾಪೆರ್ಬಾಗಿಲದೊಳ್
ಚರಿಸುವಗಜವಾಜಿನರರ ಸಂದಣಿಯಿಂದಂ
ಸುರಪುರಸೌಂದರ್ಯವುತಾ
ಸರಿಯುಲ್ಲದಕೆಂಬತೆರದೆ ತಾನಿರುತಿರ್ಕುಂ । ೭
ಅನಿಮಿಷನಿಕರಂ ನಗರದ
ತನಿಗಂಪಂ ಘ್ರಾಣಿಸಲ್ಕೆಮನೆಗಳೆಗಗನಾಂ
ಗಣದೊಳ್ ನಿರ್ಮಿಸಿದರೊಯೆನೆ
ಘನಶೋಭೆಯ ತಾಳ್ದಧ್ವಜಪತಾಕಿಗಳಿರ್ಕುಂ । ೮
ಗಗನಮುದೆಂಬಾಕರಿಯುಂ
ಸೊಗಸಿಂ ಸಿಂಗರಿಸುತಿನನ ಮೆರವಣಿಗೆಯನುಂ
ಲಗುಬಗೆಯಿಂ ಮಾಡುವರೆನೆ
ಮುಗಿಲಂ ಮುಟ್ಟಿರುವಕಳಸಕನ್ನಡಿತೋರ್ಕುಂ । ೯
ಪುರದೊಳ್ಚರಿಪರಮುತ್ತಿನ
ಸರಗಳಪೊಳಪಿಂದೆರನ್ನಕಿರಣಗಳಿಂದಂ
ಪರಿವುದುತಮತಾನಲ್ಲದೆ
ಬರುವೊಡೆರವಿಗೆಲ್ಲಿಮಾರ್ಗಕೋಟಿಯುಮಿಕ್ಕಿ । ೧೦
ಬಾಗಿಲದೊಂದಕೆನೀರದು
ಸಾಗುವಕಾಲುವೆಯು ಬಾಳೆದಾಳಿಂಬರಗಳ್

ನೀಗಿಸುವವುತಾಪವತಾವ್
ಯೋಗಿಪನಾರದನು ಬಂದನಾಪುರದೊಳಗಂ । ೧೧

[ಚಂಪಕಮಾಲಾವೃತ್ತ]

ಯೋಚಿಸಿಬಂದನಾಮುನಿಪ ನಂದಿಯುತಾಮಗನಾಗಿಬರ್ಪುದಂ
ಸೂಚಿಸಲೆಂದುಮಾದರಸ ಬಾಗಿಲಕಾಣಲುಮಾಪಲಾಂಬಿಕೆ
ರಾಜನುತೋಷದಿಂನಮಿಸಿ ಪಾದದವಾರಿಯನೀಂಟಿಮೀಯುತಂ
ಪೂಜೆಯುಗೈದು ಕೇಳಿದರುಯೋಗಿವರೇಣ್ಯನು ಬಂದಮುರ್ಪವಂ । ೧೨

**ಕಂದಪದ್ಯ**

ಎಲೆಮುನಿಪನಿಮ್ಮ ಕರುಣದ
ಬಲಮಿಲ್ಲಗೆ ಬರಲುಮುರ್ಪವೇನಿಹುದೈನೀಂ
ಮಲಹರರೂಪನೆನಮ್ಮೊಳ್
ಸಲಿಸುವ ಸೌಭಾಗ್ಯಮೇನದೆಂದೆರಗಿದರೈ. । ೧೩
ಪಾಪಿಗಳಿರುತಿಹತಾಣಕೆ
ಶ್ರೀಪತಿಸಖಬಂದತೆರದೆ ನಿಮ್ಮಾಗಮನಂ
ವ್ಯಾಪಿಸಿತೈಮೋದವತಾ
ನಾಪುರಹರ ರೂಪಪೇಳ್ವುದೆಂದೆರಗಿದರೈ । ೧೪

## ವಚನ

ಎನಲಾಮುನಿಪಾಲಂ ರಾಜನೊಳಿಂದನೆಲೆಭೂಪಪುರಹರನು ತನ್ನ
ಭಕ್ತರಿಂಧರೆಯುಂಪಾವನಗೊಳಿಪುದವನಕರ್ತವ್ಯಮಿರ್ಪುದೆಂಬುವದರಿಯ ೧೫

(**ಕಂದಪದ್ಯ**)

ಚರಿಸುವಕಾರ್ಯವು ನಮ್ಮದು
ಧರಣಿಪಸದ್ಭಕ್ತರಲ್ಲಿ ನಿತ್ಯದೊಳಂನಾವ್

ಸುರರಸುರೆರುಯಕ್ಷರಕಿ
ನ್ನರರಾ ಲೋಕವನು ತಿರುಗಿಬಂದಿಹೆನಿಲ್ಲಿ । ೧೬
ಪೊಡವಿಪ ನಿನ್ನಾದರಕಂ
ಕಡುಮೆಚ್ಚಿದೆ ವರವಬೇಡು ಪಾಲಿಪೆನೈನಾ
ಬಿಡುಬಿಡುಮನದಿಹದುಗುಡವ
ಕೊಡುವೆನು ನೀಂಬೇಡಿದಿಷ್ಟವೆಂದಂ ಮುನಿಪಂ । ೧೭
ಮಾದರಸಮಾದಲಾಂಬಿಕೆ
ಮೋದದೆಮುನಿ ವಾಕ್ಯಕೇಳಿಹರುಷಿತರಾದರ್
ಮೇದಿನಿಯೊಳ್ಸತರಿಲ್ಲದೆ
ಬಾಧೆಯುತಾಳ್ದಿಹೆವು ದೇವಪರಿಹರಿಸೆಂದರ್ । ೧೮

(ಉತ್ಪಲಮಾಲಾವೃತ್ತ)

ದೇವನೆತಮ್ಮ ಪಾದಗಳಕಾಣುತಲಿಂದಿಗೆಧನ್ಯರಾದೆವೈ
ಭಾವಜನಾಶರೂಪಕನೆ ಪಿಂದಿನಜನ್ಮದಪುಣ್ಯದಿಂದಲಿ
ನಾವಿಹೆತಾಣಕೈದಿದವು ಬೇಗನೆನೀದಯಮಾಡುಪುತ್ರನಂ
ಪಾವನಮಾಡುತಾಕುವರ ಪುಟ್ಟುತಸಾಯಲಪುತ್ರನಾಗೆನಾಂ । ೧೯

ಕಂದಪದ್ಯ

ಅತಿಥಿಗಳುಬಾರರಿಲ್ಲಿಗೆ
ಸತತದೆ ಜರೆಯುುವರು ಜನರುಬಂಜೆಗಳೆನುತಂ
ಮತಿಯುತದೇವನೆನಮಗಾ
ಸುತನಂಪಾಲಿಸುವದೆಂದುಪದವಿಡಿದರುತಾವ್ । ೨೧
ಸುತನಿಲ್ಲದಿರ್ಪಮನುಜಗೆ
ಗತಿಯೇತಾನಿಲ್ಲವೆಂದುಪೇಳ್ವರುವಿಬುಧರ್
ಮತಿಭ್ರಾಂತಿಗೊಂಡೆನಾನೆಲೆ
ಯತಿವರನೀಂಕರುಣಮಾಡುಪರಶಿವರೂಪಾ । ೨೨

## ಉತ್ಪಲಮಾಲಾವೃತ್ತ

ಕಂದನಲೀಲೆಕಾಣದಿಹನೇತ್ರವುತಾನದುಖಟ್ವನೇತ್ರವೈ
ಸುಂದರಬಾಲನುಣ್ಣದಕುಚಂಗಳುತಾವಜಕಂಠದಾಕುಚಂ
ಕಂದಗೆಮುದ್ದುನೀಡದಿಹನಾರಿಮುಖಂಬಿಲದಗ್ರದಾಮುಖಂ
ಕಂದನನೆತ್ತದಿರ್ದಕರಬಾಗಿಲಕಿಕ್ಕಿದಕೀಲಿಯಾಕರಂ । ೨೩

## — ವಚನ —

ಇಂತಾಲ್ಪರಿಯುತ್ತಪಾದದ್ವಯುವಪಿಡಿದಿರ್ದಮಾದರಸಮಾದಲಾಂ
ಬಿಕೆಯರನ್ನೀಕ್ಷಿಸುತಯೋಗಿಂದ್ರಂಮುನ್ನಾದಕೈಲಾಸದಹದನವನ್ನು
ಸುರಿದರಿವರ್ಗೆಭಕ್ತಿಯಂಕುರಿಸದೆಂದೆನುತದಂಮಾಜಿಭಕ್ತಿಯಂ
ಪುಟ್ಟಿಸಿದಂ । ೨೪

### (ಮತ್ತೇಭವಿಕ್ರೀಡಿತವೃತ್ತ)

ಬಿಡುನೀಂಶೋಕವನಂದಿದೇವಗ್ರಹದೊಳ್ನೀಮಾಡುಸತ್ಪೂಜೆಯಂ
ಧೃಡದೊಳ್ಮಾದರಸಾಸುಕಾಂತೆಯೊಡಗೂಡುತ್ತಂಮಹಾಭಕ್ತಿಯಿಂ
ಕೊಡುನೀಂಭಾವವಭೇದಮಾಡದವನೊಳ್ನೀಬೇಡುಸತ್ಪುತ್ರನಂ
ಕೊಡವಂತಾನಿದುಸತ್ಯವೆಂದುನುಡಿದಂಯೋಗೀಶಸಂತೋಷದಿಂ । ೨೫

### ( ಕಂದಪದ್ಯ )

ಪುಟ್ಟುವಕೇಳೈನಿನ್ನಯ
ಹೊಟ್ಟೆಯೊಳಂತರಳನವಗೆನಾಮವಭಕ್ತ
ಶ್ರೇಷ್ಟಂಬಸವೇಶ್ವರನೆಂ
ದಿಟ್ಟರೆಸಾಕವನುಮುಂದೆಮೂನಿತನಪ್ಪಂ ॥ ೨೬

ಅಷ್ಟಾವರಣವಿಭೂಷಿತ
ಶ್ರೇಷ್ಟಂಪುಟ್ಟುವನುಕೇಳುಮಾದರಸನೆನೀಂ.

ಸ್ಪಷ್ಟಂಪುಸಿನುಡಿಯಲ್ಲಿಂ
ಪುಟ್ಟುವದೀಶ್ವರನಕಳೆಯುನಿನ್ನುದರದೊಳು ॥ ೨೬

## ವಚನ

ಇಂತುಮುನಿರಾಯಂಆಶೀರ್ವಾದಮಂಮಾಡಿಪ್ರಸಾದಮಂ
ಕೊಂಡುಪೋಗಲಾಮಾದರಸಂಮನಾನಂದದಿ । ೨೭

## ಕಂದಪದ್ಯ

ಮುನಿವರಪೇಳಿದನಿಯಮವ
ಮನದೊಳ್ತಳೆಯುತ್ತನಂದಿಗ್ರಹಸಾರಣೆಯಂ
ವಿನಯದೆಪೂಜಾಧ್ಯಾನವ
ದಿನದಿನವಂಮಾಡಿತರಳನನ್ನಾಶಿಸುವಂ । ೨೮
ಇರಲೊಂದುದಿನದೊಳುದಯದೆ
ಪರಮಾತ್ಮನಧ್ಯಾನದಿಂದವ್ಯೆದೊಳೆಯುತಲಾ
ಪರಮಾನಂದದೊಳುಭಯರು
ಹರವಾಹನನಾಲಯಕ್ಕೆಪೋಪುತ್ಸವದಿಂ ॥ ೨೯

## ಮತ್ತೇಭವಿಕ್ರೀಡಿತವೃತ್ತ

ಭರದಿಂಮಾದರಸಂ ಸುಕಾಂತೆಯೊಡನೇ ತಾಕೊಂಡುಸಾಮಗ್ರಿಯಂ
ವರಧೂಪಂಸುಮನಂಗಳಂ ಭಸಿತಮುಂಕರ್ಪೂರದ್ರವ್ಯಂಗಳಂ
ಕರದೊಳ್ನಿರ್ಮಲವಾರಿಯುಂ ಫಲಗಳಂ ಮೇಣ್ನಾರಿಕೇಳಂಗಳಂ
ಪರಮಾನಂದದಚಿತ್ತದಿಂ ಪೊರಟಕೇಳ್ರಾಮೇಶತತ್ಕಾಲದೊಳ್ । ೩೦

## (ಕಂದಪದ್ಯ)

ಬಂದರುಮುದವಣಿಗರುತಾ
ವಂದದೆಕೈಪಿಡಿದು ಮುಂದೆಭೂಸುರರೀರ್ವರ್

ಬಂದರುವೇದವನುಡಿಯುತ
ಬಂದರುಕೋಲ್ಪಿಡಿದಶೂದ್ರರು ಭಯರುಬೇಗಂ । ೩೧
ತೋಟಿಗನೊಬ್ಬನುಹಸ್ತದೆ
ಮಾಟಾಗಿಹ ಚೂತಫಲವನಿತ್ತನುಕೇಳ್ಪೈ
ನೋಟದೆಮುದವಂ ತಾಳ್ದಂ
ನೀಟಕ್ಕಂ ಮುನಿಯುವಾಕ್ಯಶಕುನದೊಳೆಂದಂ । ೩೨
ಶುಭಶಕುನವ ಕಾಣಲುತಾ
ನಭವಂ ಕರುಣಿಸುತಕೊಡುವನೆಮಗಂಮಗನಂ
ಶುಭವೆನುತಲಿಮುಡದಿಸಹಿ
ತುಭಯರು ಮೋದದಲಿದೇವಗ್ರಹಮಂಪೊಕ್ಕರ್ । ೩೩

## ಉತ್ಪಲಮಾಲಾವೃತ್ತ

ಪೋದರು ದೇವನಲ್ಲಿವರದಂಪತಿಗಳ್ಬಹುಭಕ್ತಿಯಿಂದಲಿ
ಮೋದವಪೊಂದಿ ಷೋಢಶವಿಧಾನದೆ ಪೂಜೆಯಗೈದುಪುನ್ನವೋ
ಲಾಧನಮಿತ್ರಧರ್ಮನನು ಧ್ಯಾನಿಸಿ ಮೂರ್ತಿಪ್ರದಕ್ಷಿಣಂಗಳಂ
ಸಾದರದಿಂದೆಮಾಡಿನಯದಿಂದಲೆ ಬೀಳ್ದರು ನಂದಿಪಾದಕೆ । ೩೪

## ಕಂದಪದ್ಯ

ಅಂಗವನಿಕ್ಕಲುದಕ್ಷಿಣ
ಶೃಂಗದಿನಂದೀಶನಿತ್ತಪೂಮಾಲೆಯನುಂ
ಮಂಗಲಮುಯದಪ್ರಸಾದಂ
ಕಂಗೊಳಿಸಲುಃಕೊಂಡರಾಗ ದಂಪತಿಗಳ್ತಾವ್ । ೩೫
ಆಲೋಕಿಸಿನಂದೀಶಂ
ಮಾಲೆಯರೂಪದಲಿಕೊಟ್ಟನೆ ಮಗಂಸುತನಂ

ಬಾಲಕನಕಂಡೆವೆನುತಲಿ
ಮಾಲೆಯ ಮಣಿಮಣಿದು ನಮಿಸಿತೋಷಿಸುತಿರ್ದರ್ । ೩೬
ಎಲೆನಾರಿಕೇಳೆನಿನಗಾ
ಮಲಹರ ತರಳನನು ಬೇಗಕರುಣಿಪನಂತೆ
ಬಲದತ್ತಣಶೃಂಗದಷುವು
ಫಲರೂಪದೆ ಬಂದುದೆಮಗದೆಂದಂನಾಥಂ ! ೩೭
ಬಿಡುಚಿಂತೆಯಭಕ್ತಿಯೊಳಂ
ಮುಡಿವುದುನೀ ಮಾಲೆಯನ್ನು ನಿನ್ನಯಮುಡಿಯೊಳ್
ನಡೆಮುನಿಗೆಬೇಗದೀಶಂ
ಕೊಡುವಂ ಬಾಲಕನಸತ್ಯಮೆಂದಂರಾಜಂ । ೩೮

## ವಚನ

ಇಂತಾನಂದದಿಂಮಾದರಸಂ ಪುಷ್ಪಮಾಲೆಯಂಸತಿಯಮುಡಿಯೊಳಿಡೆ ಭಯಭಕ್ತಿಯಿಂದಾಮಾದಲಾಂಬಿಕೆ ಸಾಷ್ಟಾಂಗಮಂನೆಗಳ್ಚಲದರಿಂದಾಕೆಗಂ ಗರ್ಭಾಂಕುರಂತಲೆದೋರಿತು ॥ ೩೯

## (ಕಂದಪದ್ಯ)

ಕೇಳೆಲೆರಾಮನೆತರುಣಿಯು
ತಾಳಲುಗರ್ಭವನುನೆರೆದನಾರಿಯರೆಲ್ಲರ್
ಆಲೋಕಿಸಿನುಡಿದರುತಾವ್
ಬಾಲೆಯಗರ್ಭವದುಸತ್ಯವೆಂದೆಂಬುತಲಿ । ೪೦
ದಿನದಿನಕೆಗರ್ಭಕಳೆತಾಂ
ಮನಬಂದಂದದೊಳೆಬೆಳೆಯೆನೋಡಿದಜನಗಳ್
ಮುನಿಮೌಳಿವಾಕ್ಯಸತ್ಯಂ
ಮನಸಿಜರಿಪುಕೊಟ್ಟನಿವರ್ಗೆಬಾಲನನೆಂದರ್ । ೪೧

ಚೆಂದದೆಮಡದಿಯುಗ್ರಹದೊಳ
ಗಿಂದುಕಳಾಧರನಧ್ಯಾನಗೊಂಡಿರುತಿರಲಾ
ಗಂದದಗರ್ಭಾಂಕುರತಾ
ಮುಂದಭಿವರ್ಧಿಸಿತುಕೇಳ್ವುದೆಂದಂಚೆನ್ನಂ । ೪೨

## ಚಂಪಕಮಾಲಾವೃತ್ತ

ತ್ರಿವಳಿಯುಮಾಜಿಬಾಸೆಯದುಕಪ್ಪೆನಿಸುತ್ತಲಿನಾರಿಯಾನನಂ
ಧವಳತೆಯಾಂತುಕೊಬ್ಬಿದಕುಚಂಗಳ್ಚೂಚುಕಕುಗ್ಗಿನಾಭಿತಾ
ಜವದೊಳ್ಮುಂದೆಬಂದುದಸಿಮಧ್ಯವುತಾನದುದೊಡ್ಡದಾಯಿತ್ತೈ
ಸವಿನುಡಿಯಾಯ್ತುಮಂದಗತಿತೋರಿತುಗರ್ಭದಚಿಹ್ನದೊಂದಿಗೆ । ೪೩
ಪಾಲಿನಸಾಗರಂತಳೆದರನ್ನಮೊತಾಘನಶಾರದಾಭ್ರದಾ
ಮೂಲದೊಳಿರ್ಪಚಂದ್ರನಹುದೋಗುರುಬೋಧೆಯೊಳಿರ್ಪಮುಕ್ತಿಯೋ
ಕಾಲನತಾತತಾನುದಯದೊಳ್ಕರಿಯಾಗಿರುವಂತೆ ರಾಮಕೇಳ್
ಬಾಲೆಯಳಾದವಾದಲಿಯಗರ್ಭದೆನಂದಿಯುಶೋಭೆಯಾಂತನು

## (ಮತ್ತೇಭವಿಕ್ರೀಡಿತವೃತ್ತ)

ಶಿವನಂನಿತ್ಯದೆಪೊತ್ತುತಾನಭವನಿಂ ತತ್ವಂಗಳಂಲಾಲಿಸಿ
ಶಿವನಿಂದಾಜ್ಞೆಯನಾಂತದೇವವೃಷಭಂತನ್ನಂಕಮಂಗರ್ಭದೊಳ್
ಜವದಿಂತೋರಲುಗರ್ಭದಿರ್ಪಶಿವಸಚ್ಚಿದ್ದೀಪಧೂಮಂಭವೋ
ದ್ಭವದಾಮಾದಲೆನಾಭಿಯಿಂಪೊರಟವೋಲಾಬಾಸೆಕಪ್ಪಾದುದು ॥ ೪೫
ಘನಚರ್ವಾಕರುಬುದ್ಧರೆಂಬಪರವಾದೀನಾಶಮಂಗೈಯುವಾ
ದಿನನಾಥಶ್ಶತರೂಪನಂದಿಕಳೆತಾಂತೋರಲ್ಮಹಾಭೂಮಿಯೊಳ್
ಜನದೊಳ್ನಿಶ್ಚಿತಮಾರ್ಗತೋರಿವರಷಟ್ಚಕ್ರಂಗಳಂಭೇದಿಸೆ
ಮನದಿಂಪಾಪವುಪೋಪುದೆಂಬತೆರದಿಂಸನ್ನಾಭಿಮುಂದಾದುದು । ೪೬

ವರದೇವಂರವಿಜೋತಿನಂದಿಕಳಿತಾಂಗರ್ಭಾಂಕದೊಳ್ಭಾಸಿಸಲ್
ಭರದಿಂಬಾಲೆಯಪಾಪತಾಕುಚಗಳಿಂ ಪಾರಾಗುತಂಪೋಯಿತೋ
ಧರೆಯೊಳ್ನಂದಿಯುಪೀರ್ವತತ್ವರಸಮಂಸಂರಕ್ಷಿಸಲ್ ಶಂಭುತಾಂ
ಭರದಿಂಬಂಧನಗೈದನೀಲರತುನಂ ತಾನಾದುದೋಚೂಚುಕಂ । ೪೭

ಮುದದಿಂಪೊತ್ತನುಸರ್ವಲೋಕವಶಿವಂಸಂಡೀಶನಾದೇವನಂ
ಮುದದಿಂಪೊತ್ತನುಮಾದಲಾಂಬೆಯುವನಂತಾಪೊತ್ತಳಾಬಾಲೆಗಂ
ಪೊದಲಿಪರ್ಾಜವವೆಂತುತಾನುಳಿವುದೈಕೇಳ್ ಸಿದ್ಧರಾಮೇಶನೇ
ಬದಲಾಯ್ತೆಂದೆನೆಮುಂದೆವಾಯ್ತುನಡೆತಿಾನಿಂತೆಂದನಾಜೆನ್ನನು । ೪೮

## ಕಂದಪದ್ಯ

ಇಂತಾಗಮಾದಲಾಂಲಿಕೆ
ಸಂತಸದಿಂಗರ್ಭತಾಳಲವಳರಸಂತಾಂ
ಕಾಂತೆಗೆನಾಲ್ಕನೆಮಾಸಕೆ
ತಾಂತಳೆದಂತೋಷಗೈವಶುಭಕಾರ್ಯಗಳಿಂ । ೪೯

ಕರೆಸಿದತನ್ನಯುಬಳಗವ
ಭರದಿಂಶಾಲೆಗಳ ರಚಿಸಿವೋದವಗೊಳಿಸಿ
ತರಿಸಿದಮೀರಿದವಸ್ತುವ
ಭರದಿಂ ಮಾಡಿಸಿದಕಾರ್ಯ ಸಂತೋಷದೊಳಿಂ । ೫೦

ನುಡಿಸಿದ ಭೇರಿಯುಪುರದೊಳ್
ಬಡವರು ಬಲ್ಲಿದರದೆಂಬ ಭಿನ್ನತೆದೊರೆದುಂ
ಕೊಡಿಸಿದ ಬೇಡಿದ ವಸ್ತುವ
ನುಡಿಯಲ್ಕಸದಳವದಾಗ ರಾಜನಮುದತಾಂ । ೫೧

ಸರ್ವಾಲಂಕೃತೆಯಿಂದುರೆ
ತೋರ್ವಳಿಗಂಸುಪುಂಸವನ ಕಾರ್ಯವಗೈದುಂ

ಸರ್ವಾಪ್ತ ಮಿತ್ರಭೃತ್ಯರ
ಸರ್ವಾಲಂಕಾರವಿತ್ತು ಕಳುಹಿದನರಸಂ ॥ ೫೨

## ಗದ್ಯ

ಇದು ಶ್ರೀಮದ್ವೀರ ಶೈವಾಚಾರಧು ರೀಣಶಾಂತವೀರ ದೇವರೊಡಲ ಬುದ್ಧಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವಜನ್ಮ ಮಹಾ ಕಾವ್ಯದೊಳ್ಪಂಚದಶಾಶ್ವಾಸಂ ಸಮಾಪ್ತಂ ಅಂತೂಸಂಧಿಹದಿನೈದಕ್ಕಂ ಗದ್ಯ ಪದ್ಯಂಗಳು ಹನ್ನೊಂದುನೂರಾ ಹತ್ತೊಂಭತ್ತಕ್ಕಂ ಮಂಗಲಮಹಾ.

# ಷೋಡಶಾಶ್ವಾಸ ಪ್ರಾರಂಭ.

(ಚಂಪಕಮಾಲಾವೃತ್ತ)

ಹರಿಯಲಿ ಭೂಮಿಯಂತಿರಿದು ಕಾಲನಕೋಣವತಂದುನಂದಿಯಂ
ಸರಿಯೆನೆಪೂಡಿನೇಗಿಲವ ನೀಬಲರಾಮನ ಬೇಡಿತಂಬುಮೇ
ಣುರುಗನರಜ್ಜುವಂ ನೆಗಳ್ಚಿನಾಗಮುಖಂಗೆಕೃಷಿತ್ವನೇಮಿಸಲ್
ಬರವದು ಬೀಳೆದೇವಭಸಿತಾಂಗದೆ ಬ್ರಹ್ಮಕಪಾಲತಾಳಿದೈ । ೧

ಸೊಡಬಲಿಭೂಮಿಯುಂಟು ಪೊಲಸೂಳುವ ನಂದಿಯುದುಂಟುವಾರಿತಾ
ಜಡೆಯೊಳಗುಂಟು ಮಾಡುತಿಹಬಾಲಕರುಂಟುಮೆಯುಂಟುಪಾಕಕೆ
ಕೆಡಿಸದೆಪೈರುಮಂ ಪೊರೆವಚಂದ್ರಮಹಾಮೃತವುಂಟುಕೈಯೊಳಂ
ದುಡಿವಮರುಳ್ಗಳುಂಟದಕೆ ನೀರಜತಾದ್ರಿಯನೇರ್ದೆಶಂಕರಾ । ೨

## ವಚನ

ಇಂತಾಮಾದಲಾಂಬಿಕೆಗೆ ಪುಂಸವನಕಾರ್ಯಮದಾಗಲ್ಗರ್ಭಮದು ಬೆಳೆ
ಯುತಿರಲಾಸುದತಿ ಮನದೆತಾಂಬಯಕೆಯಂ ಪೊಂದಿದಳ್ । ೩

ಶಿವಕಥೆಯನ್ನು ಕೇಳ್ವಶಿವಶೇಷಮ ನುಂಬಶಿವಾಗಮಂಗಳಂ
ಶಿವಚರಮೂರ್ತಿಯಂ ಭಜಿಪಶೈವರತೀರ್ಥವನೊಲ್ದುಮೀಂಟುವ
ಶಿವನೊಳುಮೋದಗೊಂಬ ಶಿವಭಕ್ತ್ರವಧಾರಣೆಗೈವ ಸಂಭ್ರಮಂ
ತವಕದೆಲಿಂಗಮಂ ಧರಿಸುವಿಚ್ಛೆಯುತೋರಿತು ಮಾದಲಾಂಬಿಗೆ ೪

## ಕಂದಪದ್ಯ

ಎಲೆರಾಮಕಷ್ಟಜೀವಿಯು
ಛಲದಲಿತಾಗರ್ಭದಲ್ಲಿಯಂಕುರಿಸಲ್ಕಾಂ

ಕಲುಷಮುದಾಗಿಹ ಬಯಕೆಯು
ತಲೆದೋರುವದಾಗಗರ್ಭನಾರಿಯುಮನದೊಳ್ । ೫
ಅದುಕಾರಣನೀಗರ್ಭಿಣಿ
ಹದನವನೆರೆನೋಡುರಾಮುಕಲಿಯುಗದೊಳಗಂ
ಮೊದಲಿಂದೆಮಣ್ಣುಬೂದಿಯು
ಮುದದಿಂತಿನ್ನಲ್ಕೆಮಣ್ಣುಮುಕ್ಕುವರಪ್ಪರ್ । ೬
ಸುಖಜೀವಿಗರ್ಭದೊಳಗಿರೆ
ಸುಖಮಿಷ್ಟಾಹಾರದ್ರಾಕ್ಷೆಮುಧುಮಂಬಯಿಪರ್
ಅಕಳಂಕದೇವಬಯಕೆಯು
ವಿಕಸಿತಮಾಗಲ್ಕೆದೇವಭಕ್ತಂಜನಿಪಂ । ೭
ವರವೀರಶೈವನಿಷ್ಠಾ
ಪರನಾನಂದೀಶಮಾದಲಾಂಬಿಕೆಯೊಡಲೊಳ್
ತ್ವರದಿಂವಾಸವಗೈಯಲ್
ಬರುವವೆಕೇಳನ್ನಬಯಿಕೆಯಾಕೆಯುಮನದೊಳ್ । ೮
ಇಂತಪ್ಪಮಾದಲಾಂಬಿಕೆ
ಸಂತಸದಿಂಗರ್ಭಲಾಂಛನತ್ವದೊಳಿರಲು
ಸಂತರಸತ್ಪುರುಷರತಾ
ನಂತರದೊಳುಧ್ಯಾನಗೈಯುತಿರ್ದಳುರಾಮು । ೯
ಅತಿಥಿಗಳಬ್ಬರವೆಚ್ಚಿತು
ಸತತಂಯಾಚಿಸುವತೆರಕೆಯಾಗೃಹದೊಳಗಂ
ಮಿತಿಮೀರಿತುತ್ಯಾಗದಕೃತಿ
ಸತಿಮಣಿಮಾವಲೆಯುಹಸ್ತಕಾಯ್ತುವಿರಾಮಂ । ೧೦
ಬಂಧುಗಳೆಲ್ಲರುತಾವತಿ
ಚೆಂದದವಸನವನುತರಲುಸತಿಮಣಿತಾನಾ

ಚಂದಿರದೆಲೆಯನಸತಿಯಳಿ
ಗಂದದೆತೋರಿಸದೆಮುಟ್ಟಲಿಲ್ಲೇನೊಂದಂ । ೧೧
ವೃತಧ್ಯಾನಜತಪಂಗಳ
ನತಿಶಯದಿಂ ಮಾಡಿಪತಿಯಸೇವೆಯಗೈದುಂ
ಸತತದೆಪತಿವ್ರತೆಯರಕುಲ
ರತುನವಿದೆಂಬಂತೆತೋರ್ದಳಾಸಾಧ್ವಿಯುತಾ । ೧೨

## ಉತ್ಪಲಮಾಲಾವೃತ್ತ

ಕೇಳಿಲೆ ರಾಮುಮಾದರಸನಾತನರಾಣಿಯುನಂದಿಧ್ಯಾನಮಂ
ತಾಳುತಭಕ್ತಿಭಾವದಲಿದಾನಜಪಂಗಳಮಾಡುತಿರ್ದರ್ರೈ
ಪೇಳುವದೇನುಮಾಸನವತುಂಬಲುದಂಪತಿಗಳ್ಸನ್ಮೋದದಿಂ
ಬಾಲನುಬರ್ಪಕಾಲವನಿರೀಕ್ಷಿಸುತಂಚಿರಕಾಲಮಿರ್ದರ್ರೈ । ೧೩

## (ಕಂದಪದ್ಯ)

ಬಂದುದಿನಂತಾವಿಬ್ಬರು
ಚಂದದೆಮೇಲ್ವಾಸಿನೊಳಗೆಶಯನಂಗೊಳೆತಾವ್
ಬಂದರುಶಂಕರಗಿರಿಜಯು
ರಂದದಶಿಸುಬಸವನನ್ನು ಕರದೊಳ್ತಳೆದುಂ । ೧೪
ಮೋದವಗೂಡುತನಂದಿಯ
ಮೂದಲಿಸುತಲಗಜೆಯಂದಳೆಲೆಚನ್ನಿಗನೇ
ಮೇದಿನಿಯೊಳ್ಬಾಳುತನೀ
ನೀಧನಪತಿಪುತ್ರಮಹಿಮೆಯಂತೋರುವುದೈ ॥ ೧೫
ರೂಢಿಯೊಳೊಂದೊಂದುದಿನಂ
ಮಾಡೈನೀಮುದದಿಮೂರುನೂರುಪವಾಡಂ

ಕೊಡಿಹಶರಣರಸಂಗದೊ
ಳೋಡಿಸುಪರಮತವ ನಳಿಸಿನೀಂ ಪರದೇವಂ । ೧೬
ಕೇಳೆಲಿರಾಮನೆಶಿವತಾ
ಬಾಲಕಬಸವಾರ್ಯನನ್ನು ಕರದೊಳ್ಪಿಡಿದುಂ
ಮೂಲೋಕಕೆಮುದಗೊಡುವಾ
ಕಾಲಾರಿಯೆ ಬಸವನಿನ್ನ ಕರ್ಣದೊಳಾನುಂ । ೧೭
ಬಿತ್ತಿದೆಶಿವಸದ್ಭಕ್ತಿಯ
ನುತ್ತಮ ಫಲವಡೆಯೊಕಂದಾದೇಹಾನಂದಾ
ಬೃತ್ಯರುಸ್ತುತ್ಯರುಮತ್ತಾ
ನಿತ್ಯಾನಿತ್ಯರು ಬಹುರುನಿನ್ನ ಸೇವಾಂತರದೊಳ್
ಎಲೆಮಗನೆನಂದಿದೇವನೆ
ನೆಲದಲಿನೀಪೋಗಿನಿನ್ನಲಿಂಗದಘನಮಂ
ಛಲದೊಳುತೋರಿಸುವದುಬಿ
ಜ್ಜಳಗಂ ನೀನಮಾತ್ಯನಾಗುತೆಂದಂದೇವಂ । ೧೯

(ಚಂಪಕಮಾಲಾವೃತ್ತ)

ಭಸಿತವಪೂಸಿಲಿಂಗವನು ಧಾರಣಗೈವುತನಂದಿದೇವನಂ
ಕುಸುಮದಮಾಲೆಯಂ ಶಿವನನೇತ್ರದಮಾಲೆಯನಿಕ್ಕಿಕಂಠದೊಳ್
ಪಶುಪತಿಬೋಧೆಯಂ ತಿಳುಹಿಕರ್ಣದೆಭೂಮಿಗೆ ತತ್ವಬೀಜವ
ನ್ನೆನೆಯುತಬರ್ಪುದೆಂದು ಭಯದಂಪತಿಮಧ್ಯದೊಳಿಟ್ಟುಪೋದರು । ೨೦

(ಕಂದಪದ್ಯ)

ಕನಸಿನೊಳೀಪರಿಯಂತಾ
ನಿನಿಯಂ ಕಂಡಂತೆಕಂಡು ಬೇಗದೊಳೆೞ್ದಂ
ಮನಸಿನ ತೋಷವನೀಯುವ
ತನಯನಕಾಣುತ್ತ ಕಾಂತೆಗೆಚ್ಚರಗೈದಂ । ೨೧

(ಉತ್ಪಲಮಾಲಾವೃತ್ತ)

ಮೊದಲದೇವಿಯೇಳ್ದು ಸುತನಂಗವನೀಕ್ಷಿಸಿ ತನ್ನಗರ್ಭದಾ
ಭೇದವನೋಡುತಂ ಮೊದಲಿನಂದದೆ ತೆಳ್ಳಗದಾಗಿತೋರಿರಲ್
ಮೋದಿನಿಯಲಿಯಚ್ಚರಿಯುತಾರುಧಿರಂ ಮಾದಲಾದಕಶ್ಮಲಂ
ಶೋಧನೆಗೈಯೆ ಕಾಣವಿವುಬಾಲನಯೊಃನಿಜನೆನ್ನುತೆತ್ತಿದಳ್ । ೨೨
ಪೇಳುವದೇನುರಾಮುಮನದೊಳ್ಮುದವಾರಿಧಿಯುಕ್ಕಿತಾಗಲೇ
ವ್ಯಾಲಸುಮಾಲತತ್ಕರುಣದಿಂ ವರಬಾಲನ ಕೊಟ್ಟನೆಂದುಭೂ
ಪಾಲನು ಮೇಲಿಮೇಲೆಸುತನಂಗವನೋಡುತ ಮೂಸುತಪ್ಪುತಾ
ಕಾಲವ ತಳ್ಳಿಲಾಸಮಯ ಎಂದ್ರನದಿಕ್ಕದುಕೆಂಪುತೋರಿತು । ೨೩

**ಕಂದಪದ್ಯ**

ಎಲೆಸಿದ್ಧರಾಮಕೇಳ್ಳೈ
ಖಲತಮದವಿನಾಶಗೈವದಿನನಾಥಂತಾಂ
ನೆಲದೊಳ್ಕೆಂಪಂ ತೋರಲ್
ಗಲಿಬಿಲಿಯಿಂದೆದ್ದವಾಗ ಕುಕ್ಕುಟಗಳ್ತಾವ್ । ೨೪

— ವಚನ —

ಆಗಲಾಪ್ರಾತಃಕಾಲದೊಳ್ । ೨೫

**ಮತ್ತೆಭವಿಕ್ರೀಡಿತವೃತ್ತ**

ಎಲೆಭೂಜಾತರೆ ಶೈವಸೂರ್ಯನಿದೆಬಂದಂಮಹದ್ಭಂಧನಂ
ಕಲುಷಂನಾಜುತತೇಜಕಾಣುತಿದೆನೀವ್ನೋಡಕ್ಕೆಮೆಲೇಳ್ವುದೈ
ಬಲದಿಂಭಕ್ತಿಯಬೀಜಬಿತ್ತಿಧರೆಯೊಳ್ಮುಕ್ತಾಫಲಂಕೊಳ್ಳುವಾ
ಇಳೆಯಾಣ್ಮಂನೆರೆಮೂಡಿಬಂದನೆನುತಂತಾವ್ನೇಳ್ದಪಾಕೋಳಿಗಳ್ । ೨೬
ಶಿವರೂಪಂಭವಜನ್ಮದಲ್ಲಿಬರೆತಾಂದೇವಾಲಯಂಮೋದದೊಳ್
ಹವಣಂಬೀರುವದೆಂದುಶಬ್ದವದುತೋರಲ್ಸೂರ್ಯನಾರಾಯಣಂ

ಭವದೊಳ್ಪುಟ್ಟಿಹನಂದಿಯಿಂದೆಯಘಮಂತಾನಾಶಮಂಗೈಯುವಾ
ನೆವದಿಂಬಂದನದೆಂಬವೋಲವನುತಾ ಪೂರ್ವಾದ್ರಿಯೊಳ್ಕಂಡನು । ೨೭

(ಕಂದಪದ್ಯ)

ದಿನಮಣಿಪಾತಾಳದೊಳಿಹ
ಘನಸರ್ಪವಜಯಿಸಿಶಿರದರನ್ನವಕೊಂಡಾ
ತನುವಿಗೆಧರಿಸಿಹನೋತಾ
ನೆನೆಕಾಂಬುದುತಾನುಧರೆಯೊಳಿನಕರದರುಣಂ । ೨೮

ದಿನನಾಥನುದಯಪೊಂದಲ್
ಮನದೊಳ್ಮುದವಾಂತುಮಾದಲಾಂಬಿಕೆಯರಸಂ
ತನಯುಗೆನಾಮುವನಿಕ್ಕಲ್
ಮನೆಯಂಸಿಂಗರಿಸಿಷಡ್ರಸಾನ್ನವಗೈದಂ ೨೯

ಬಂದರುಮಿತ್ರಾಪ್ತಜನಂ
ಸಂದೋಹಂನೆರೆದುರನ್ನತೊಟ್ಟಿಲಕಟ್ಟಿ
ಮಂದಗಜಗಮನಿಯರುತಾ
ಪಂದದೆನಗುತಿರ್ಪಬಾಲನಂನೋಡಿದರ್ಕೆ ೩೦

ಬಣ್ಣದತೊಟ್ಟಿಲದೊಳ್ನಿರಿ
ಚಿನ್ನವಪೋಲ್ವಂಗಮುಳ್ಳಶಿಸುವನ್ನಿಡುತಂ
ಸನ್ನುತಜೋಗುಳಪಾಡುತ
ನನ್ನಿಯೊಳಂಬಸವನೆಂದುಪೆಸರನ್ನಿಟ್ಟರ್ । ೩೧

## ವಚನ

ಆಗಳಾನಾರಿಸಂದೋಹಂಬಸವರಸನೆಂಬಪೆಸರಿನಿಂಜೋಗುಳಂ
ಪಾಡುತಿರ್ದರ್ । ೩೨

## [ಶಾರ್ದೂಲವಿಕ್ರೀಡಿತವೃತ್ತ]

ಜೋಜೋ ಶ್ರೀಬಸವೇಶದೇವಜಯತೇಜೋಜೋಪರಂಜ್ಯೋತಿಯೆ
ಜೋಜೋಶೈವಸುಧಾರಸಾಂಬುನಿಧಿಯೇಜೋಜೋಮಹೇಶಾಂಕನೇ
ಜೋಜೋಭೂಷಿತಭಸ್ಮದಂಗಜಯತೇಜೋಚಂದ್ರಬಿಂಬಾನನಾ
ಜೋಜೋಮಂಗಳರೂಪನೇವೃಷಭನೇಜೋಯಂದುತಾವ್ಪಾಡಿದರ್
ಜೋಜೋಭಕ್ತಿಯಮೂಲನಪ್ರತಿಮನೇಜೋಮುಕ್ತಿಸತ್ಕಾಂತನೇ
ಜೋಜೋಪಂಡಿತಮೌಳಿಯೇಷುಮುಖನೇಜೋಸರ್ವಭೂತಾತ್ಮನೇ
ಜೋಜೋಷಟ್ಸ್ಥಲಬ್ರಹ್ಮಿಯೇಸುಗುಣನೇಜೋಮೌನಿಯಾನಂದನೇ
ಜೋಜೋದೇವರದೇವನೇಬಸವನೇಜೋಯಂದುತಾವ್ಪಾಡಿದರ್ ॥ ೩೪

## ಕಂದಪದ್ಯ

ಇಂತಾಗನಾರಿನಿಚಯಂ
ಸಂತಸದಿಂಬಸವನೆಂದುಜೋಗುಳವಾಡಲ್
ಕಂತುವಿನವೈರಿಧರ್ಮಂ
ತಾಂತಳೆದಂಬಸವನಾಮವಂಕುಂಭಿನಿಯೊಳ್ । ೩೫

ಅಕ್ಷಯತೃತೀಯವಾದಿನ
ಚಕ್ಷುತ್ರಯಧರ್ಮರೂಪುಜನಿಸಿದಸಮಯಂ
ನಕ್ಷತ್ರವಿತ್ತುರೋಹಿಣಿ
ಸಾಕ್ಷಾತ್‌ಬಸವೇಶತಾನುರಕ್ಷಿಸಲೆನ್ನಂ । ೩೬

## ಉತ್ಪಲಮಾಲಾವೃತ್ತ

ಓದುತಕೇಳ್ದು ಭಕ್ತಿಯಲಿನಂದಿಯ ಜನ್ಮವದಿರ್ಪಕಾವ್ಯಮಂ
ಮೇದಿನಿಯಲ್ಲಿ ಬಾಳೆನರನಷ್ಟಸುಸಂಪದ ಧಾನ್ಯದಾಗರಂ
ಸಾಧಿಸಿಕಾಂತೆಜಾತರಲಿ ಪೂರಿತನಾಗುವ ಸೌಖ್ಯದಿಂದಲೇ
ಬಾಧೆಯಪೊಂದದಂತೆ ಪರಲೋಕಕೆ ಪೋಪನುಸತ್ಯವೆಂದನು । ೩೭

(ಕಂದಪದ್ಯ)

ಇದುಬಸವಜನ್ಮ ಕಾವ್ಯಂ
ಇದನೊಲ್ದೋದುತಲಿ ಕೇಳ್ದುಪಠಿಸುವರೆಲ್ಲರ್
ಒದಗುವರು ಮುಕ್ತಿಸದನಕೆ
ಬದಲಾಗದು ನೋಡುರಾಮುಸತ್ಯವಿದೆಂದಂ । ೩೮

ಪುತ್ರರಬಯಿಸುವ ಮನುಜರ್
ಚೈತ್ರದಲಿದ ನೋದಿ ಕೇಳಿತಾನಕ್ಷಯದಾ
ತತೀಯದದಿವಸಕೆ ಮುಗಿಸಲ್
ನೇತ್ರತ್ರಯಂ ಕೊಡುವನವರ್ಗೆಬಾಲಕರಂತಾಂ । ೩೯

ಇಷ್ಟಾರ್ಥವೊಂದು ಸಿದ್ಧಿಸೆ
ಜೇಷ್ಠದೊಳೀ ಕಾವ್ಯವನ್ನು ಪೂಜಿಸುತೋದೀ
ವೃಷ್ಟಾನ್ನವ ಗಣಕಿಕ್ಕಲ್
ತುಷ್ಟಂ ತಾನಪ್ಪನರನು ಸೌಭಾಗ್ಯದೊಳಂ । ೪೦

ಶಿವಮಾಸದೊಳಗೆ ಮನೆಯೊಳ್
ಶ್ರವಣಂ ಗೈಯಲ್ಕೆಭವವುನಾಶಮುದಾಗು
ತ್ತವನಂ ಸುಮೋಕ್ಷಕೊಯ್ವಂ
ಭವಹರತಾನಿದುವೆ ಸತ್ಯವೆಂದಂಚೆನ್ನಂ । ೪೧

## — ವಚನ —

ಇಂತೆಂದುಚೆನ್ನಬಸವಂ ನಂದಿಜನ್ಮಮನ್ನೊರೆದುಮತ್ತಿಂತೆಂದಂ । ೪೨

## ಕಂದಪದ್ಯ

ಕೇಳೆಲೆರಾಮನೆ ನಂದಿಯು
ತಾಳುತಲೀಜನ್ಮಮುಂದೆ ಕಲ್ಯಾಣದೆತಾ

ಬಾಳಿಸಿಲೀಲೆಯತೋರುತ
ಭಾಳಾಕ್ಷನೊಳೈಕ್ಯ ಪೊಂದಿದಂಕಪ್ಪಡಿಯೊಳ್ । ೪೩
ಇಂತೆಸೆವ ಬಸವಜನ್ಮವ
ಸಂತಸದಿಂ ಕೇಳಿಸಿದ್ಧರಾಮೇಶ್ವರತಾ
ಮುಂತಡ್ಡಬೀಳ್ದುದೇವನೆ
ಸಂತೋಷವ ಬೀರ್ದೆಮನಸಿಗೆಂದೆರಗಿದನು । ೪೪
ಜಯವೆಂದುದುಚೆನ್ನನಸಭೆ
ಜಯಬೀರುವ ನಂದಿಜನ್ಮವಂ ಕೇಳುತತಾವ್
ಭಯದಿಂನವಿಸುತ ಪೋದರ್
ನಯದಿಂತಂ ತಮ್ಮಗೃಹಕೆ ಭಕ್ತರನಿಚಯಂ । ೪೫
ಇಂತಾಬಸವಜನ್ಮಕಾವ್ಯದೊಳ್ ಚೆನ್ನಬಸವೇಶನಖಿಲಗಣಕತಿಪ್ರೀತಿ
ಯುಪ್ಪಂ ತೊರೆದಸತ್ಕಾವ್ಯವನ್ನೆನ್ನಬಾಲಮತಿಯಿಂ ನೆಗಳ್ಚಿಸಿದದೇವನಾತನಂ
ಪ್ರೇಮದಿಂನುತಿಪೆಂ । ೪೬

## ಕಂದಪದ್ಯ

ಪುರಹರಶಂಕರಗಿರಿಜಾ
ವರನೀರಕ್ಷಿಪುದಿದೆನಗೆ ವರಗಳನಿತ್ತುಂ
ಮೆರೆವುದುನಿನ್ನಯನಾಮಂ
ಭರದಿಂದಂ ಭಕ್ತರಿಷ್ಟವರಕರನೆಂದುಂ । ೪೭
ಆದರಿಂಬೇಡುವೆನಿನ್ನ
ನ್ನೊದಗಿಸಿಕೊಡು ಬೇಡಿದಿಷ್ಟಸಿದ್ಧಿಗಳೆಲ್ಲಂ
ಮುದದಿಂ ಧನಗೃಹಸುತಮೇಣ್
ಸುದತೀ ಸೌಖ್ಯವನು ಬೇಡೆನಾನೆಲೆದೇವಾ । ೪೮

## ಮತ್ತೇಭವಿಕ್ರೀಡಿತವೃತ್ತ

ಧನಪಾಲಾಪ್ತನೆನಿನ್ನರೀತಿಗತಿಯಂ ನಾನೋಡುತೇಂಕೇಳಲ್ಕೆ
ಧನಮಿಲ್ಲಂ ಗುಣಮಿಲ್ಲಮಾಲಯಮದಿಲ್ಲಂ ಚಿನ್ನರನ್ನಂಗಳಿ
ಲ್ಲಿನಿತಾಗಿರ್ದಪೆ ಬೇಡಲಾನಿವುಗಳಂ ನೀನೆಲ್ಲಿತಂದೀವೆಯೋ
ಮನದೊಳ್‌ಶಂಕೆಯು ಬೇಡಬೇಡೆನದನಾಂ ಸಾಯುಜ್ಯಮಂಪಾಲಿಸ್ಕೆ । ೪೯

(ಕಂದಪದ್ಯ)

ನುತಿಯಂ ಗೈದಡೆನೀಸ
ನ್ಮತಿಯಂ ಕೊಡುತಿರ್ಪೆನುತಿಸದಿರ್ದರೆಯವರಂ
ನುತಿಗೈವತೆರನಮಾಡುವ
ಕೃತಿಯಂ ಕಬ್ಬಿಗರಕೆಬ್ಬದಿಂತೋರ್ದಪೆನೀಂ । ೫೦

ಶಂಕರನಿನ್ನಯ ನುತಿಯೊಂ
ದಕುರಮಂಕಾಣದಾನು ನುತಿಸುವದೇನೈ
ಪಂಕಜ ಸಂಗದಭೃಂಗಂ
ಬಿಂಕವಗೈದಂತೆನುತರುನುಡಿದುದನುಡಿವೆಂ । ೫೧

ಮೊದಲಿನ ಕವಿಗಳುನನ್ನಯ
ವದನಕ್ಕಿಕ್ಕಿದರುತಪ್ಪು ಕಾವ್ಯಾಮೃತಮಂ
ಆದರಿಂದಲವರಮತದಿಂ
ಮುದದಿಂ ರಚಿಸಿದೆನುನಾನದವರಂನುತಿಸಿ । ೫೨

ವರಕವಿಷಡಕ್ಷರೇಶ್ವರ
ಸುರಪುರಲಕ್ಷ್ಮೀಶರನ್ನಪೊಂಪರ್ಕಳಮೇಣ್
ವಿರುಪಾಕ್ಷದೇವಪದಮಂ
ಶಿರದೊಳ್ನಾತಾಳುತವರರುಚಿಯಂಕೊಂಡೆಂ । ೫೩

ಈತೆರದಿಂಧ್ಯಾನಿಸಿನಾ
ದಾತರಪಾದವನು ಹೃದಯಪೀಠದೊಳಿಡುತಂ

ಖ್ಯಾತಿಯುಕಬ್ಬವನುಗಿಸಿದೆ
ಪ್ರೀತಿಯೊಳಿದನೋದಿ ಕೇಳ್ವದೆಲ್ಲಾ ಜನಗಳ್ । ೫೪
ಬಂದಿರೆದೋಷಗಳಿದರೊಳ್
ಚಂದದೆ ಶೋಧಿಸುತ ಶುದ್ಧಗೈವುದುಸುಜನರ್
ಬಂಧುರದ ಚರಿತೆತಾನಿದು
ನಂದಿಯವಾಹನನ ಕರುಣನಿಮಗಾಗುವದೈ । ೫೫
ನಾಕಲಿತವನಲ್ಲೇನುಂ
ವ್ಯಾಕರಣದ ನೋಟವೆಂಬುದೆನಗಿನಿಸಿಲ್ಲಂ ॥
ಸಾಕಷ್ಟುದೋಷವಿರುತಿರೆ
ನೂಕುತಲವುಗಳನು ತಿದ್ದಿಪೇಳಿರಿವಿಬುಧರ್ । ೫೬

(ಶಾರ್ದೂಲವಿಕ್ರೀಡಿತವೃತ್ತ)

ಶ್ರೀಶೈವಾಂಬುಧಿ ಚಂದ್ರನಾದಬಸವಂ ಪುಟ್ಟಿರ್ಪಸತ್ಕಾವ್ಯವ
ನ್ನೀಶಂ ತನ್ನಯಲೀಲೆಯಿಂದೆಸೆದತಾಂ ನನ್ನಿಂದಲಾಯ್ತೆಂದೊಡ
ಭ್ಯಾಸಂ ನಾತಳೆದಿರ್ಪುದೈ ಸುತಿಳಿಯಲ್ಕೀಕಾವ್ಯದೊಂದಕ್ಕರಂ
ಧ್ಯಾಸಂ ಗೈಯಲುಸಾಧ್ಯಮಲ್ಲಕವಿಯೆಂದೆಂತೆಂಬಿರ್ನೈ ನನ್ನನು । ೫೭

ಕಂದಪದ್ಯ

ಸುರುಚಿರಕೃತಿಕೃತಫಲಮಂ
ಪರಿಪರಿಬೋಧಿಸುತಲೆನಗದನುಭವವಿತ್ತುಂ
ಸುರರೊಳಗೆಬೆರೆತುಕೊಂಡಿಹ
ಗುರುಸುಬ್ರಹ್ಮಣ್ಯದೇವಗರ್ಪಿತಗೈದೆಂ । ೫೮

(ಚಂಪಕಮಾಲಾವೃತ್ತ)

ಸುರುಚಿರಶಾಲಿವಾಹನಶಕಾನ್ವಿತರತ್ನಗುಹೌಘಯೋಗಭೂ
ಪರಿಗಣನಾಂಕಸರ್ವಜಿತುವಬ್ದದಕಾರ್ತಿಕದಾದಿಪಕ್ಷವಿ
ಸ್ಫುರಿತಚತುರ್ಥಿಗೀಕೃತಿಸುಮಂಗಲಮಾಯಿತುತಾನದದ್ರಿಜಾ
ವರಸುತ ವೀರಭದ್ರದಯದಿಂಗುರುಲಿಂಗಕವೀಂದ್ರನಿರ್ಮಿತಂ ೫೯

## (ಕಂದಪದ್ಯ)

ಜಯಜಯವೃಷಭನೆಭೂಪಾ
ಜಯಜಯಚೈತನ್ಯರೂಪನಿಗಮಕಲಾಪ
ಜಯಜಯಚಿದ್ಘನದೀಪಾ
ಜಯಕೊಡುಮತ್ಕೃತಿಗೆ ಭವದವಾರಿಧಿಲೋಪ । ೬೦

ಮಂಗಲಬಸವನಪಾದಕೆ
ಮಂಗಲಮೀಕಾವ್ಯವನ್ನು ಪಠಿಸುವಜನಕಂ
ಮಂಗಲಲೇಖನಕರ್ತಗೆ
ಮಂಗಲವಾತಂಗೆ ಭೋಧಗೈದಿರ್ಪಂಗೆ । ೬೧

ಪದವಂ ನೋಡುವರಸಿಕರ್
ಪದಸ್ವಾದಾಮೃತವನೀಂಟಲೆಂಬುವಮನದಿಂ
ಪದಿನಾರು ಸಂಧಿರಚಿಸಿದೆ
ಪದಿನಾರುಕಳಾಭರಿತನೆನ್ನ ಕವಿತಾಚಂದ್ರಂ । ೬೨

## ಗದ್ಯ

ಇದು ಶ್ರೀಮದ್ವೀರ ಶೈವಾಚಾರಧುರೀಣಶಾಂತವೀರ ದೇವರೊಡಲ ಬುದಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವಜನ್ಮ ಮಹಾ ಕಾವ್ಯದೊಳ್ ಷೋಡಶಾಶ್ವಾಸಂ ಸಮಾಪ್ತಂ ಅಂತೂಸಂಧಿ ಹದಿನಾರಕ್ಕಂ ಗದ್ಯಪದ್ಯಂಗಳು ಹನ್ನೊಂದುನೂರಾ ಎಂಭತ್ತೊಂದಕ್ಕಂ ಮಂಗಲಮಹಾ



# ಶ್ರೀ ತಪ್ಪು ತಿದ್ದಿ ಕೊಳ್ಳಿರಿ ಶ್ರೀ

| ತಪ್ಪು | ಒ | ಪುಟ | ಪದ |
|---|---|---|---|
| ಹ್ರುದಯ | ಹೃದಯ | ೨ | ೯ |
| ಸುಬ್ದ | ಸುಬ್ರ | ೩ | ೧೧ |
| ವಠಣ | ವರಣ | ೬ | ೨೮ |
| ಲಂಬ್ದಿ | ಲಬುದಿ | ೬ | ಗದ್ಯ |
| ದೇವ | ತ್ವರಿತದಿದೇವ | ೯ | ೨೩ |
| ಭೆಕ್ತ | ಭಕ್ತ | ೯ | ೨೩ |
| ಮೇಘಾ | ಮೇಘಾ | ೧೯ | ೬೦ |
| ವರ್ಣ | ವರಣ | ೧೯ | ೬೧ |
| ಲಬ್ದಿ | ಲಬುದಿ | ೨೨ | ಗದ್ಯ |
| ಧೃಡ | ಧಡ | ೨೬ | ೧೪ |
| ವರಗೆ | ವರಕೆ | ೨೭ | ೨೦ |
| ತಡಪ | ತಡವ | ೨೯ | ೩೦ |
| ಕುಲಿವೆ | ಕುಲದೊಳ್ | ೨೯ | ೩೨ |
| ಲಬ್ಧಿ | ಲಬುದಿ | ೩೬ | ಗದ್ಯ |
| ವನಲಕ್ಷಿ | ವನಲಕ್ಷ್ಮಿ | ೪೩ | ೫೧ |
| ಕರರೆಲ್ಲ | ಕರೆಲ್ಲ | ೪೮ | ೫೪ |
| ಚತುರ್ಥ | ಚಾತುರ್ಥ | ೪೯ | ೫೯ |
| ಲಬ್ಧ | ಲಬುದಿ | ೪೯ | ಗದ್ಯ |

| ತಪ್ಪು | ಒಪ್ಪು | ಪುಟ | ಪದ್ಯ |
|---|---|---|---|
| ಕೇಸಕಾಂಬರ | ಕೇಶಕಧೃತ | ೫೦ | ೨ |
| ವೊಲೋದರ | ಏನಂದಡೆ | ೫೩ | ೧೯ |
| ಪ್ರೋಗ | ಪ್ರೋಗೆ | ೫೫ | ೩೧ |
| ರೆಸದು | ರೆನಿಸದು | ೫೬ | ೩೬ |
| ನಾಶಮುದಾ | ನಾಶಮಹುದಾ | ೮೮ | ೫೬ |
| ಸಂಭುತ | ಸಂಭೂತ | ೯೧ | ೭೩ |
| ಬುಥಿ | ಬುಧಿ | ೯೧ | ೭೭ |
| ನೊಳ್ | ನೊಳು | ೯೯ | ೨೦ |
| ಧರಿಸಿದ | ಧರಿಸಿ | ೧೧೭ | ೨ |
| ಳದಡ | ಳಡ | ೧೨೮ | ೫೯ |
| ಗಳು | ಗಳ್ | ೧೪೫ | ೬೫ |
| ದದು | ದದುಸ್ತೈ | ೧೬೩ | ೭೨ |
| ದಯುತಾಂ | ದತಾಂ | ೧೮೩ | ೩೭ |
| ಕೆಂನರಂ | ಕೊನರಂ | ೧೮೩ | ೪೧ |
| ರಘನ | ವರಘನ | ೧೯೭ | ೩೦ |

# ಶಬ್ದಾರ್ಥಗಳು

| ಕಠಿಣಶಬ್ದಗಳು | ಅರ್ಥವು |
|---|---|
| ಅಜಮುತ್ತಾತ | ಲಕ್ಷ್ಮೀಜನಕ (ಸಮುದ್ರ) |
| ಅನ್ವಯ | ತಾಯಿಯ (ಕುಂಭ) |
| ಅಜಗರ | ದಾಸರ ಹಾವು |
| ಅಖಿಲ | ನಿಂದ್ಯ |
| ಅರ | (ಕಲ್ಲು) |
| ಅಜಕಂಠ | ಆಡಿನ ಕುತ್ತಿಗೆ |
| ಕೈಟಭಾ | ಪಾರ್ವತಿ |
| ಕೇಕಷಧೃತ | ಎಲವನ್ನು ಧರಿಸಿದ |
| ಕಾಲನತಾತ | ಯಮ |
| ಕುವರ | ಕು-ಕೆಟ್ಟ ವರವನ್ನು ಕೊಡುವ (ವಿಘ್ನೇಶ) |
| ಕವಿ | ಶುಕ್ರ |
| ಕಿಸಲಯ | ಚಿಗರು (ಯಸಳು) |
| ಕೋಶ | ಬತ್ತಳಿಕೆ (ಭಾಂಡಾರ) |
| ಕಂಬು | ಕಡಗ |
| ಕೋಶಪಾಲ | ಕುಭೇರ |
| ಕಮಲಾಂಕ | ಚಂದ್ರ |
| ಕಮಲಾಂಬಕಪೂರ್ಣ | ನೀರುತುಂಬಿದಕಣ್ಣು |
| ಕುಲಾಲ | ಕುಂಬಾರ (ತಿಗರಿ) |
| ಖಿಥ | ಅಗ್ನಿ |
| ಖಟ್ವ | ಹೊರಸು (ಮಂಚ) |
| ಗುರುವರನಿಲ್ಲದಿರ್ಪ ದಿಶ | ಗುರುಗ್ರಹಬಾರದಿರ್ದ ದಿಕ್ಕು |
| ಗತಿಭಂಗ | ಮಂದನಡಿಗೆ |
| ಗೋಷ್ಟ | ಆಕಳದೊಡ್ಡಿ |

| | |
|---|---|
| ಗಗಳಾಂಗ | ವಿಷಶರೀರ (ಸ್ಥೂಲಸೂಕ್ಷ್ಮಕಾರಣ) |
| ತ್ರಿಗರಳಾಂಗ | ಯೋಗಾಂಗ ಭೋಗಾಂಗ ತೇಗಾಂಗ |
| ಗೋಪತಿ | ಸೂರ್ಯ |
| ಗುಣೌಘ | ಷಡ್ಗುಣ (೬) ಸಂಖ್ಯಾವಾಚಕ |
| ಗೂಢಪದ | ಸರ್ಪ |
| ಗೋತ್ರ | ಕುಲ-ಬೆಟ್ಟ-ಆಕಳಹಿಂಡು |
| ಚೀಲ | ಚಂದ್ರ |
| ಛಲದಂಕಾಯುಧ | ಶಂಖು |
| ಜಾಲಕ | ಬಲೆಗಾರ (ಉಕ್ಕಿನ ಕವಚ) |
| ಜೀಮೂತ | ಮೇಘ |
| ಜಾಂಗಲಿಕ | ವಿಷವನ್ನು ಯಿಳಿಸುವ ವೈದ್ಯ |
| ತ್ರಿಗಣರ | ಮೂರುಮೂರ್ತಿಗಳು |
| ತ್ರಿದಶರು | ದೇವತೆಗಳು |
| ತಮುಖಳ | ಅಂಧಕಾಸುರ |
| ತಮ | ಪಾಪ (ಕತ್ತಲೆ) |
| ದಿನಮಣಿಪುತ್ರ | ಯಮ |
| ದ್ವಿಜ | ಬ್ರಾಹ್ಮಣ ಗೌತಮ ನಕ್ಷತ್ರ |
| ದ್ವಿರೂಪ | ಅರ್ಧನಾರೀಶ್ವರ |
| ದುರುಳರು | ದುಷ್ಟರು |
| ನಿಶಿತಾಸ್ತ್ರ | ಕತ್ತಲೆಯಬಾಣ [ತೀಕ್ಷ್ಣಬಾಣ] |
| ನಿಬಿಡ | ದಟ್ಟವಾದ |
| ಪಿಂಗಾ | ಪಾರ್ವತಿ |
| ಪುತ್ರನ ಕಾಣುತುಬ್ಬುವನ | ಚಂದ್ರನನ್ನು ಕಂಡು ಸಮುದ್ರ ಉಕ್ಕೇರುವಿಕೆ |
| ಪಾಡು | ಸಮಾನ |
| ಪ್ರೇತಭೂ | ರುದ್ರಭೂಮಿ |
| ಪೂಗ | ಅಡಿಕೆ |
| ಭುಜಗ | ಸರ್ಪ (ರಾಹು) |

| | |
|---|---|
| ಬುಧ | ಬುಧಗ್ರಹ (ಪಂಡಿತ) |
| ಭೂ | ಭೂಮಿ (೧) ಸಂಖ್ಯಾವಾಚಕ |
| ಛೈತ್ರ | ಹರಗೋಲು |
| ಬಿಡಾಲ | ಬೆಕ್ಕು |
| ಬಿಡೌಜ | ಇಂದ್ರ |
| ಬಿಲದಗ್ರ | ಗುಹೆಯತುದಿ |
| ಭವೋದ್ಭವ | ಭವದಲ್ಲಿ ಹುಟ್ಟಿದ |
| ಮಿತ್ರನಮೋಸದಿಂ ಮಡಿದ | ಸೂರ್ಯನ ಮೋಸದಿಂದಸತ್ತ (ಶಿಂಧುರಾಜ) |
| ಮೌನೀಶ | ಸಪ್ತರುಷಿಮಂಡಲ (ರುಷಿಗಳು) |
| ಮೈತ್ರ | ಬ್ರಾಹ್ಮಣ [ಬ್ರಹ್ಮವಸ್ತು] |
| ಮಿಹಿರ | ಸೂರ್ಯ |
| ಮಿಹಿರಕಾಂತಾ | ಮನ್ಮಥನ ಹೆಂಡತಿ [ರತಿ] |
| ಮೋಹಿನಿ | ಆಕಳು |
| ಮುನ್ನಿನ ರೂಪು | ಸೀತೆಯಮುನ್ನಿನ ಲಕ್ಷ್ಮೀರೂಪು |
| ಮಧು | ಅಮೃತ-ಸುರೆ-ಮಕರಂದ |
| ಮೃತ್ತಿಕಾ | ಮಣ್ಣು |
| ಮಾ | ಲಕ್ಷ್ಮಿ |
| ಮುಖಂ | ಹೊರಗಿನಬೈಲು |
| ಯಾಮಿನಿನಿತಾಂತಿ | ಮಹಾಕಾಳಿ [ಕಾಳರಾತ್ರಿ] |
| ಯೋಗ | ಅಷ್ಟಾಂಗಯೋಗ ೮ ಸಂಖ್ಯಾವಾಚಕ |
| ರಮಾನಾಥಗೋಲಂ | ವಿಷ್ಣುಮಾಯಾಬಂಧನಗೈದ |
| ರವಿಚಂದ್ರ | ಸ್ವಾಸೊಚ್ಛಾಸ |
| ರತ್ನ | ನವರತ್ನ ೯ ಸಂಖ್ಯಾವಾಚಕ |
| ರುಚಿ | ಇಚ್ಛೆ |
| ರತ್ನರಕ್ಷೆ | ರತ್ನದಾವಿಗೆ |
| ರಾಜರಾಜ | ಕುಭೇರ |
| ಲವಿತ್ರ | ಕುಡಗೋಲು ( ಈಳಿಗೆಮಣಿ ) |
| ವಾಮಾ | ಸ್ತ್ರೀಯಳು |
| ವಾಮಾ | ಎಡಭಾಗದಶರೀರ |

| | |
|---|---|
| ವಿಭು | ಶಂಕರ |
| ವಿಷ | ನೀರು ( ವಿಷ ) |
| ವಿಷಸಂಭವ | ಚಂದ್ರ |
| ವೃಕ | ತೋಳ |
| ವ್ಯಾಲಕ | ಸರ್ಪ |
| ಸತೀ | ಪಾರ್ವತಿ ( ಪತೀವ್ರತೆ ) ( ನಾರಿ ) |
| ಜನಕಂಗೆ | ದಕ್ಷಬ್ರಹ್ಮಗೆ |
| ಸತೀಜನಕಂ | ನಾರೀಜನರಿಗೆ |
| ಸೊಡಬಲಿ | ಬಲಿಭೂಮಿ |
| ಸಂಗವನಿಡಿದಾಕೆ | ವೀರಸಂಗವ್ವೆ |
| ಸಂಕೀರ್ಣ | ಒಂದಕ್ಕೊಂದುಹೊಂದಿಕೊಂಡ |
| ಸ್ವಾಮಿ | ಷಣ್ಮುಖ |
| ಶಂಕರ | ಸುಖಕರ ( ಮಳೆ ) |
| ಸೇನೆಕರಿ | ಸೇನಾನಿ [ ಷಣ್ಮುಖ ] |
| ಸರೀಸೃಪ | ಸರ್ಪ |
| ಸಾಮಜ | ಆನೆ |
| ಸೌರಭೇಯಾಂಕ | ನಂದಿಧ್ವಜ |
| ಸಲಿಲ | ನೀರು |
| ಶ್ವಸನ | ವಾಯು |
| ಶಾರದಾಭ್ರ | ಶರತ್ಕಾಲದಮೋಡ |
| ಸಮಕೋಲ | ಸರ್ಪ |
| ಷಂಮುಖತಾತ | ವಿಷ್ಣುಮೊದಲಾದವರಿಗೆ [ ತಾತ ] ಅನುಗ್ರಹಿಸಲ್ಪಟ್ಟ |
| ಹಂಸ | ಸೂರ್ಯ |
| ಹಿಂಸೆ | ನಾಶ |
| ಹರಿದ್ವೃಗ | ಗ್ಯ ೧ |
| ಓಂಕಾರಾದ್ಯಂ | ಏಕೋದೇವ |
| ಉಗ್ರಯೋಗ | ಕರ್ಕಶಬಾಳು. ಬಿಸಿಲಿನತಾಪ. ಕಠಿಣತರಯುಕ್ತ |
| ಇಂಗಳ | ಅ. |
| ಇಳೆದೇರ | ಧರೆಮಾತ್ರ |